WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜನವರಿ ೨೬, ೨೦೧೨ (ಮಾಘ ೬, ಶಕ ವರ್ಷ ೧೯೩೩) | ಸಂಚಿಕೆ ೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 2010–11ನೆ ಸಾಲಿನ ಔಷಧಿ ಖರೀದಿ ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಮಾನ್ಯ ಲೋಕಾಯುಕ್ತರು ಸಲ್ಲಿಸಿರುವ ವರದಿ ಸಂಬಂಧ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :**

1. ಕರ್ನಾಟಕ ಲೋಕಾಯುಕ್ತ ರವರ ಕಛೇರಿ ಪತ್ರ ಸಂಖ್ಯೆ: Comp.LOK.BCD 102, 115, 153, 158 ಮತ್ತು 343/2010 ದಿನಾಂಕ: 03–02–2011.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 17 ಹೆಚ್‌ಪಿಸಿ 2011, ದಿನಾಂಕ: 11–04–2011.
3. ಸಚಿವ ಸಂಪುಟ ತೀರ್ಮಾನ ಸಂಖ್ಯೆ: ಸಿ/479/2011 ದಿನಾಂಕ: 28–10–2011.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಯಿಂದ 2010–11ನೇ ಸಾಲಿಗೆ ಔಷಧಿ ಖರೀದಿ ಮತ್ತು ಟೆಂಡರ್ ಪ್ರಕ್ರಿಯೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರ ಕುರಿತು ಮಾನ್ಯ ಕರ್ನಾಟಕ ಲೋಕಾಯುಕ್ತರಿಗೆ ಸಲ್ಲಿಸಲಾಗಿದ್ದ 5 ದೂರುಗಳನ್ನು ಆಧರಿಸಿ ಮಾನ್ಯ ಲೋಕಾಯುಕ್ತರು 'ಡಾಕ್ಟರ್ಸ್ ಫೌಂಡೇಷನ್' ಸದಸ್ಯರಿಂದ ತನಿಖೆ ನಡೆಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(1) ಮತ್ತು 12(3) ಪ್ರಕಾರ ಕ್ರಮ ಕೈಕೊಳ್ಳಲು ಮೇಲೆ (1)ರ ಕ್ರಮಾಂಕದಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಕಳುಹಿಸಿಕೊಟ್ಟಿರುತ್ತಾರೆ. ಮಾನ್ಯ ಲೋಕಯುಕ್ತರು ತಮ್ಮ ವಿವರವಾದ ವರದಿಯಲ್ಲಿ ಸರ್ಕಾರಿ ಔಷಧಿ ಮಳಿಗೆಯ ಕಾರ್ಯನಿರ್ವಹಣೆಯನ್ನು ಉತ್ತಮಪಡಿಸಲು ಮತ್ತು ಕರ್ನಾಟಕ ಆಂಟಿಬಯೋಟಿಕ್ಸ್ ಮತ್ತು ಫಾರ್ಮಾಸ್ಯೂಟಿಕಲ್ಸ್ ಲಿಮಿಟೆಡ್ (ಕೆಎಪಿಎಲ್)ನಿಂದ ಔಷಧಿ ಸಂಗ್ರಹಣೆಗೆ ಸಂಬಂಧಿಸಿದಂತೆ, ಹಲವಾರು ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ಜೊತೆಗೆ ಮೇಲ್ಕಂಡ ಔಷಧಿ ಖರೀದಿ ಮತ್ತು ಟೆಂಡರ್ ಪ್ರಕ್ರಿಯೆ ಸಂಬಂಧ ತೀರ್ಮಾನ ಕೈಗೊಳ್ಳುವಲ್ಲಿ ಭಾಗಿಯಾಗಿದ್ದರು ಮತ್ತು ದುರುದ್ದೇಶ ಹೊಂದಿದ್ದರು ಎನ್ನಲಾದ ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ಸ್ ಮತ್ತು ವೇರ್‌ಹೌಸಿಂಗ್ ಸೊಸೈಟಿ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕೆಲವು ಅಧಿಕಾರಿ/ನೌಕರರುಗಳ ವಿರುದ್ಧ ಸೇವಾ ನಿಯಮಗಳನುಸಾರ ಸೂಕ್ತ ಕ್ರಮ ಕೈಗೊಳ್ಳುವಂತೆ ಸಹ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಲೋಕಾಯುಕ್ತರ ವರದಿಯನ್ನು ಸರ್ಕಾರವು ಸ್ಥಿರೀಕರಿಸಿದ ನಂತರ ಮೇಲೆ (2)ರ ಕ್ರಮಾಂಕದಲ್ಲಿ ಓದಲಾದ ದಿನಾಂಕ: 11–04–2011ರ ಆದೇಶದಲ್ಲಿ ಸರ್ಕಾರಿ ಔಷಧಿ ಮಳಿಗೆಯಲ್ಲಿ 2010–11ನೇ ಸಾಲಿನ ಔಷಧಿ ಖರೀದಿ ಮತ್ತು ಟೆಂಡರ್ ಪ್ರಕ್ರಿಯೆ ಮೂಲಕ ಔಷಧಿ ಸಂಗ್ರಹಣೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಬಗ್ಗೆ ಲೋಕಯುಕ್ತರ ತನಿಖಾ ವರದಿಯಲ್ಲಿ ಕೆಲವು ಅಧಿಕಾರಿಗಳು ಔಷಧಿ ಖರೀದಿ ಅಥವಾ ಟೆಂಡರ್ ಪ್ರಕ್ರಿಯೆ ಸಂಬಂಧ ತೀರ್ಮಾನ ತೆಗೆದುಕೊಳ್ಳುವಾಗ ದುರುದ್ದೇಶ ಹೊಂದಿದ್ದರು ಎಂಬ ಬಗ್ಗೆ ಹಾಗೂ ತತ್ಪರಿಣಾಮವಾಗಿ ರೂ. 50.86/– ಕೋಟಿಗಳಷ್ಟು ನಷ್ಟ ಸರ್ಕಾರದ ಬೊಕ್ಕಸಕ್ಕೆ ಉಂಟಾಗುತ್ತಿತ್ತು ಎಂಬುದರ ಬಗ್ಗೆ ಪರಿಶೀಲಿಸಿ ವರದಿ ನೀಡುವ ಸಲುವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಿವೃತ್ತ ನ್ಯಾಯಾಧೀಶರನ್ನೊಳಗೊಂಡಂತೆ ಅಧಿಕಾರಿಗಳ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿತ್ತು. ಸದರಿ ಉನ್ನತ ಮಟ್ಟದ ಸಮಿತಿಯು ಲೋಕಾಯುಕ್ತರ ವರದಿ ಬಗ್ಗೆ ವಿವರವಾಗಿ ಪರಿಶೀಲಿಸಿ, ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತದೆ. ಅದರಂತೆ ಔಷಧಿ ಖರೀದಿಗೆ ಸಂಬಂಧಿಸಿದಂತೆ, ತೀರ್ಮಾನ ಕೈಗೊಳ್ಳುವ ಸಂಪೂರ್ಣ ಪ್ರಕ್ರಿಯೆ ಸಾಮೂಹಿಕ ಸ್ವರೂಪದ್ದಾಗಿರುತ್ತದೆ ಎಂದು ಇದಕ್ಕೆ ಕೆಲವರನ್ನು ಹೊಣೆಗಾರರನ್ನಾಗಿ ಮಾಡಿದಲ್ಲಿ, ಸೂಕ್ತ ದಾಖಲೆ/ಪುರಾವೆಗಳು ಇಲ್ಲದಿರುವುದರಿಂದ ಅದು ಕಾನೂನಿನ ದೃಷ್ಟಿಯಲ್ಲಿ ಊರ್ಜಿತವಾಗುವುದಿಲ್ಲ ಎಂದು ಸಮಿತಿಯ ಅಭಿಪ್ರಾಯ ಪಟ್ಟಿದೆ. ಮಾನ್ಯ ಲೋಕಾಯುಕ್ತರ ವರದಿಯಲ್ಲಿ ಕೆಲವು ಅಧಿಕಾರಿಗಳು ಔಷಧಿ ಖರೀದಿ ಅಥವಾ ಟೆಂಡರ್ ಪ್ರಕ್ರಿಯೆ ಸಂಬಂದ ತೀರ್ಮಾನ ಕೈಗೊಳ್ಳುವಾಗ ದುರುದ್ದೇಶ ಹೊಂದಿದ್ದರು ಎಂಬುದರ ಬಗ್ಗೆ ಇಲಾಖಾ ವಿಚಾರಣೆ ಕೈಗೊಂಡಲ್ಲಿ ಅದು ಸಹ ಕಾನೂನು ರೀತ್ಯಾ ಊರ್ಜಿತವಾಗುವ ಸಾದ್ಯತೆ ಇಲ್ಲವೆಂದು ಸಮಿತಿ ಅಭಿಪ್ರಾಯ ಪಟ್ಟಿರುತ್ತದೆ.

ಆದರೆ, ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯ ಉನ್ನತ ಮಟ್ಟದ ಸಮಿತಿಯು ತನ್ನ ವರದಿಯಲ್ಲಿ Glutamin ಖರೀದಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಯ ಚೀಫ್ ಸೂಪರ್‌ವೈಸಿಂಗ್ ಅಧಿಕಾರಿ ಮತ್ತು ಇತರೆ ಸಂಬಂಧಿಸಿದ ಸಿಬ್ಬಂದಿಯು Therapeutic Committee and Need Assessement Committee ಸಭೆಗೆ ಅವಶ್ಯ ಮಾಹಿತಿಯನ್ನು ನೀಡುವಲ್ಲಿ ವಿಫಲರಾಗಿದ್ದಾರೆಂದು ಅಭಿಪ್ರಾಯ ವ್ಯಕ್ತಪಡಿಸಿ ಅವರುಗಳ ವಿರುದ್ಧ ಕ್ರಮ ಜರುಗಿಸಲು ಶಿಫಾರಸ್ಸು ಮಾಡಿರುತ್ತದೆ.

ಮಾನ್ಯ ಲೋಕಾಯುಕ್ತರ ವರದಿಯಲ್ಲಿನ ಶಿಫಾರಸ್ಸುಗಳನ್ನು ಜಾರಿಗೊಳಿಸುವ ಬಗ್ಗೆ ಪ್ರಸ್ತಾವನೆಯನ್ನು ಪ್ರಕರಣ ಸಂಖ್ಯೆ: ಸಿ:479/2011 ದಿನಾಂಕ: 28–10–2011 ರಲ್ಲಿ ಸಚಿವ ಸಂಪುಟದ ಮುಂದೆ ಮಂಡಿಸಿ ಆದೇಶ ಪಡೆಯಲಾಗಿದೆ.

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 17 ಹೆಚ್‌ಪಿಸಿ 2011, ಬೆಂಗಳೂರು, ದಿನಾಂಕ: 09–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಚಿತವಾದ ಉನ್ನತ ಮಟ್ಟದ ಸಮಿತಿಯು ಸಲ್ಲಿಸಿರುವ ವರದಿಯಲ್ಲಿನ ಶಿಫಾರಸ್ಸುಗಳನ್ನು ಸರ್ಕಾರವು ಅಂಗೀಕರಿಸಿದೆ. ಅದರಂತೆ ಮಾನ್ಯ ಲೋಕಯುಕ್ತರ ವರದಿಯಲ್ಲಿ ಸೂಚಿಸಿರುವ ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಯ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಧಿಕಾರಿಗಳ ವಿರುದ್ಧ ಸೇವಾ ನಿಯಮಗಳ ಅಡಿ ಶಿಸ್ತು ಕ್ರಮ ಜರುಗಿಸುವುದನ್ನು ಕೈಬಿಡಲಾಗಿದೆ. ಆದರೆ, Glutamin ಖರೀದಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಯ ಮುಖ್ಯ ಸೂಪರ್‌ವೈಸಿಂಗ್ ಅಧಿಕಾರಿ ಹಾಗೂ ಇತರೆ ಸಂಬಂಧಿಸಿದ ಸಿಬ್ಬಂದಿಯು Therapeutic Committee and Need Assessment Committee ಸಭೆಗೆ ಅವಶ್ಯ ಮಾಹಿತಿಯನ್ನು ನೀಡುವಲ್ಲಿ ವಿಫಲವಾಗಿರುವ ಕಾರಣ ಅವರುಗಳ ವಿರುದ್ಧ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ಕ್ರಮ ಜರುಗಿಸುವಂತೆ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ರಾಜ್ಯ ಡ್ರಗ್ಸ್ ಲಾಜಿಸ್ಟಿಕ್ ಮತ್ತು ವೇರ್‌ಹೌಸಿಂಗ್ ಸೊಸೈಟಿಯ ಕಾರ್ಯ ನಿರ್ವಹಣೆಯನ್ನು ಉತ್ತಮಪಡಿಸಲು ಈ ಆದೇಶದ ಅನುಬಂಧ–1 ರಲ್ಲಿ ತಿಳಿಸಿರುವಂತೆ ಹಾಗೂ ಅದೇ ರೀತಿ ಮೆ: ಕರ್ನಾಟಕ ಆ್ಯಂಟಿಬಯೋಟೆಕ್ಸ್ ಮತ್ತು ಫಾರ್ಮಾಸ್ಯೂಟಿಕಲ್ಸ್ ಲಿಮಿಟೆಡ್ (ಕೆಎಪಿಎಲ್), ಬೆಂಗಳೂರು ಸಂಸ್ಥೆಗೆ ಸಂಬಂಧಿಸಿದಂತೆ ಅನುಬಂಧ–2 ರಲ್ಲಿ ತಿಳಿಸಿರುವ ಅಂಶಗಳನ್ನು ಕಾರ್ಯಗತಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೃಂದ ಮತ್ತು ನೇಮಕಾತಿ)

## ಅನುಬಂಧ–1

ಸರ್ಕಾರದ ಆದೇಶ ಸಂಖ್ಯೆ: ಆಕುಕ 17 ಹೆಚ್‌ಪಿಸಿ 2011 ದಿನಾಂಕ: 09–11–2011

ಸರ್ಕಾರಿ ಔಷಧಿ ಮಳಿಗೆ (ಕೆ.ಎಸ್.ಡಿ.ಎಲ್. ಮತ್ತು ಡಬ್ಲ್ಯೂ.ಎಸ್.) ಕಾರ್ಯ ನಿರ್ವಹಣೆ ಉತ್ತಮಪಡಿಸುವ ಬಗ್ಗೆ

| Sl No. | Recommendation | Action Proposed |
|---|---|---|
| 1 | To root out the influence of drug mafia the KDSL&WS should adopt/go for global tendering, pre-qualification tendering and encouraging purchases directly from the manufactures. | This Practice is already in vogue since 2010. All purchases above 1 lakh are done only through e-Tender. All drug purchases are made from primary manufacturers only. |
| 2 | Post of Addl. Director should be filled-up by a technical person. | This is an Administrative post and the Additional Director is assisted by senior doctors and pharamacists. In Government Order dated: 17-05-2003 provision has been made to fill up the post of Additional Director from among the following category of officers.<br>1. Additional Director of Health or<br>2. Selection Scale KAS Officers or<br>3. Senior Scale IAS Officer.<br>A provision to appoint a technical person to the post already exists. Depending upon the Administrative exigencies, posting of Additional Director of the Society is made from among the said category of officers. (Govt. Order No. HFW 64 HPC 2001 dated: 17-05-2003) |
| 3 | The whole functioning of the KSDL&WS needs revamping. It should have a separate staffing pattern to meet the aims and objectives of the KSDL&WS. Until such time the staff from DH&FWS should be deputed for a period of not more than 2 years. The staff completes one term should not be considered for second posting at any cost. The staff should undergo | Action will be taken to have a separate staffing pattern for the society. A separate Cadre and Recruitment rules will be drafted. Till then, officials from the Health Department will be posted on deputation basis. Action will be taken to limit the tenure of the officials as per the standing Government Orders relating to deputation. |

| | | |
|---|---|---|
| | training in the procurement process prior to the posting. | |
| 4 | The members of the STC should consist of following:<br>(a) The Director of State Institute of Health & Family Welfare Services as Chairman. Since, Director, DH&FWS is busy taking care of the regular and daily activities of the whole department of H&FWS, he/she may not find sufficient time to concentrate on the functioning of KSDL&WS.<br>(b) The Addl. Director, KSDL&WS will be the convener;<br>The following persons should be members of STC (No substitute);<br>(c) The Superintendents of General Hospitals like KC General Hospital, Malleshwaram, Bangalore and Jayanagara General Hospital, Bangalore.<br>(d) A Member from Pharmacy Council.<br>(e) One Professor of Medicine.<br>(f) One Professor of Surgery.<br>(g) One Professor of Pharmacology.<br>(h) Two District Surgeons.<br>(i) The Heads of Departments of the concerned speicialties may be invited as members for specific meetings.<br>(j) Drug controller will be an invitee as and when required. | The State Therapeutic Committee at present comprises of most of the recommended members. (Notification No. GMS/PUR 03/2005-06 dated: 21-09-2005)<br>It is felt that the Director of Health & Family Welfare Services should be continued as the Chairman of the State Therapeutic Committee, being the head of the Department, he/she will be in a better position to drive committee.<br>The State Therapeutic Committee is constituted by a Notification dated 21-09-2005. Proposed members by the Lokayukta at (c), (d), (e), (f), (h) & (j) are in the committee either as members or as invitees. One District Surgeon and one District Health Officer are in the committee as invitees.<br>The Heads of the Department of the concerned specialities are invitees in the State Therpeutic committee by virtue of being heads of the Sub-Committees.<br>Professor of Pharmacology is not a member at present and he will also be included in the committee. |
| | The STC should periodically revise essential drugs list and this should not be only for the purposes of calling the tender. Any new drug to be added to the list should be discussed in detail. The Doctor's who proposes for the purchase of new drug/item should be invited to the hospital Committees and asked to make a presentation which should be discussed in detail. For inclusion of such drugs and chemicals in the tender which are not in the pharmacopeias shall be discussed in the State Therapeutic Committee before inclusion in the tender. | This recommendation is alredy in vogue. The Sub-Committees of the State Therapeutic Committee are headed by Heads of the Department & Professors of various specializations. Based on the reports of the Sub-committees, the State Therapeutic Committee finalizes the Essential Drug List.<br>Whenever any new drugs is recommended it will be submitted in a format with all details and is extensively discussed in the State Therapeutic Committee. The new drug is included in the essential drug list only after the acceptance by the Committee. |
| | The opinion of the each member of the Committees should be recorded in the proceedings and ciruculated among the members of the Committee for approval. | This recommendation is already in vogue. |
| | A new durg which has to be procured shall be initially procured in small quantities and used in different hospitals and shall be purchased in large quantities only after getting the good feedback. | This recommendation is already being practiced. |
| | The STC member shall be provided with the updated Essential Drug List well in advance and with the information to come prepared for useful discussion. | |
| | The STC member should be informed about the budget allocation and the proposed quantum of drug to be procured with the approximate cost of each drug well in advance. | This committee decides about the drugs and their specifications. The quantum of drugs to be purchased, the budget allocation for the drugs etc., are examined by the Need Assessment Committee. |
| 5 | The essential drug list should be revised thoroughly. This list should be based on standard pharmacopeias | The Essential drug list is revised based on standard pharmacopeia. The society is purchasing only the drugs which |

| | | |
|---|---|---|
| | like IP, BP, USP, etc., the KSDL&WS should procure only the drugs which are specified in the Essential Drug List. | have been specified in the essential drug list. |
| 6 | Transparency in procurement shall be mandatory. There shall be a Committee of experts to frame the tender conditions which shall be followed strictly. As far as possible the conditions must be simple and transparent and should comply with KTPP Act. (it can be out sourced) Tender once floated shall not be altered under any circumstances.<br>As the purchases runs into crores of Rupees pre-qualification tender should be must. | Procurement process is transparent. All the provisions of KTPP Act are being followed. |
| 7 | All the institutions which procure materials from the KSDL&WS should be networked immediately. | Necessary instructions are already issued to KSDL&WS, as decided in the meeting held on 01-01-2010. |
| 8 | The tender process shall be completed well in advance of the next financial year. Calender of events shall be published in the beginning and shall be adhered to, for maintaining discipline, accountability and transparency. | Accepted. |
| 9 | The District Surgeon instead of Pharmacist should be in-charge of District Warehouse to ensure proper accountability as per the existing Circular, which is issued already but it is not being followed. | This is being followed and at present District Surgeon is controlling officer of the District Drug Warehouses. The Pharmacist works under the District Surgeon. (Reference No.: ಆಕುಕ 105 ಆಯುಕ್ತರು/2006–07 ದಿನಾಂಕ: 16ನೇ ಸೆಪ್ಟೆಂಬರ್ 2006) |
| 10 | The Requirement of institutions should be categorized into:<br>(a) Most common drugs and other equipments required by all the institutions.<br>(b) The drugs and other items required by the secondary level hospitals (a+b).<br>(c) Drugs and other items required by the major hospitals;<br>(Tertiary Hospitals) (a+b+c)<br>The indents shall be directly uploaded by the respective institutions based on the inpatient and outpatient attendance of last three years. | The present practice is almost on these lines based on inpatient and-outpatient and outpatient attendance in each of the institutions. |
| 11 | A drug selectively used by individual Institutions can be procured at the institution level but only after the approval by local Aroghya Raksha Samithi. | This sysem is in practice. The invidual institutions will be advised to take approval of the local Aroghya Raksha Samithi. |
| 12 | The required drugs and other items at the time of epidemics and calamities shall be purchased by operating the user fund or funds from the Government, from Zilla Panchayat instead of utilizing KDSL&WS funds. | Instruction are already there to purchase the drugs from user funds and untied funds in case of emergencies. -Circular No.: PD/RCH/69/08-09 dated: 16-07-2008. |
| 13 | The basis of assessing the required quantities by need Assessment Committee shall be;<br>(a) The total number of patients (both IP&OP) treated in the preceding three years by the individual institutions and the stock on hand at the end of the year. The KSDL&WS should bring this to the notice of STC. In such of those institutions which are upgraded from 100 to 200 beds and above, the requirements should be assessed by NAC in proportion to the expected raise in bed strength. | The recommendations are being followed. The institutions are given budget based on total number of patients treated Based on their budget the institutions make indents. The stock on hand is substracted and final required quantity is arrived at. |

| | | |
|---|---|---|
| | (b) The indents received from various institutions during current year and stock on hand on 31st December of the preceding year should be the criteria for assessing the needs of the institution by the NAC. The STC & NAC should discuss the above information in detail and come to a conclusion. | This is being followed already. The stock on hand is calculated at the time of finalizing the indents. |
| | (c) (c) 10-20% in excess of the need can be allowed for the procurement only by the NAC and stocked in the District Warehouses for supply in case of need for the peripheral institutions. | This recommendation is agreed to in principle. |
| | (d) The NAC members should also be informed about the budget allocation and the proposed quantum of drug to be procured with the approximate cost of each drug well in advance. The NAC members should not be from among STC members. | The NAC members are being informed about the budget allocation and quantum of drugs to be procured.<br>All members of the NAC are officers of the H.&F.W. Department. |
| 14 | The work of KSDL&WS shall be audited by an external agency every year, so also the financial audit for better performance and transference. Such audited report should be submitted to the Register of Co-operative Societies every year without fail. | The society's accounts are audited by Chartered Accountants at present.<br>Audit reports are being submitted to the concerned Registrar. |
| 15 | The NRHM shall identify the drugs and other items to be suipplied under its budget and revise it from time to time to specifically meet the objectives of NRHM. | Already in vogue. (ಆರ್‌ಓ/ಉಕಾ02/2009–10 ದಿನಾಂಕ: 11–01–2010) |
| 16 | Most of the institutions under the Health Dept. are already networked upto a 50% of the PHC's for getting information. The same website can be updated to suit the requirements of KDSL&WS also. For this all the Primary Health Centres should be provided with computers immediately | Agreed. All the PHCs are already provided with computers. |
| 17 | The NRHM should be instructed to give the list of drugs that are to be procured well in advance to KSDL&WS to facilitate the tendering processes. The NRHM should monitor the drugs procured and supplied undr its budget. | Already in vogue. (ಆರ್‌ಓ/ಉಕಾ02/2009–10 ದಿನಾಂಕ: 11–01–2010) |
| 18 | The Electronic Data process in Section of KSDL&WS should be supervised by the technical staff the data should be analyzed from time to time for a better assessment of the needs of the institution. | This is already in vogue. The EDP section work is out sourced and the work is supervised by staff who are B.E., (Computer Graduate) or M.C.A. |
| 19 | The KSDL&WS should monitor to ensure proper utilization of the drugs and other chemicals by various hospitals of the State by appointing vigilance team. | Accepted. |
| 20 | As per the second interim report the department should procure I.V. Fluids packed only in FFS bags/bottle instead of I.V. Fluids packed in non/PVC self collapsible bags and regular sterile disposable syringes instead of AD Syringes to avoid unwanted expenditure to the Government. | Being implemented already. The State Therapautic committee has also taken a decision on the same lines. (Ref. No.: GMS/e-Tend/77-Drugs/27-1/2011-12, dated: 18-07-2011 and GMS/e-Tend/151-Drugs/27-11/2011-12, dated: 18-07-2011) |

## ಅನುಬಂಧ–II

**ಸರ್ಕಾರದ ಆದೇಶ ಸಂಖ್ಯೆ: ಆಕುಕ 17 ಹೆಚ್‌ಪಿಸಿ 2011 ದಿನಾಂಕ: 09–11–2011**

**ಕರ್ನಾಟಕ ಆಂಟಿಬಯೋಟೆಕ್ಸ್ ಮತ್ತು ಫಾರ್ಮಾಸ್ಯೂಟಿಕಲ್ಸ್ ಲಿಮಿಟೆಡ್ (ಕೆಎಪಿಎಲ್) ನಿಂದ ಔಷಧಿ ಸಂಗ್ರಹಣೆ ಬಗ್ಗೆ**

| | | |
|---|---|---|
| 21 | KAPL has grown itself to a profit making and exporting company to various nations. Hence, the KAPL should now compete openly with the other companies in tenders instead of getting 4(g) exemption. | M/s Karnataka Antibiotics and Pharmaceuticals Ltd., (KAPL) is joint sector public enterprise - Central Government contributing 59.17% and the State Government 40.83% participation 59.17% and the State Government 40.83% participation in the share capital of the company.<br>Taking into consideration various judgements, recommendations of Legislature Committee, etc., and in the best interest of the State & the Public Sector Unit, the State Government has extended 4(g) exemption under KTTP Act for procurement of drugs manufactured by this company at the rates approved by National Pharmaceutical Pricing Authority. (NPPA) |
| 22 | The department of H&FWS is spending huge portion of the budget for purchase of various IV fluids. The purchase of IV fluids from open market will lead to irregularities like inadequate supply, variation in prices and variation in qualities etc. Hence, KAPL may be entrusted with the manufacture of IV fluid to ensure continuous and adequate supply of IV fluids. The KAPL may be encouraged for manufacturing and supply of IV fluids with the cap of 15% margin as allowed in case of small scale industries. | M/s KAPL has informed that it has neither the technology nor the facility to produce I.V. Fluids. Howsever, the possibility of procuring IV fluids from M/s Hindustan Antibiotics Ltd, another Public Sector Enterprise and formerly the parent company of M/s KAPL, will be explored. |
| 23 | When a quality drug is available at a cheaper rate in the market, the KSDL & WS should not purchase such drug from KAPL at a higher cost under the pretext of 4(g) exemption to prevent loss to the Government exchequer. | M/s KAPL is having ISO grading 9001 & 14001. The drugs manufactured and supplied by M/s KAPL, are having good reputation. The drugs are being procured from M/s KAPL at the rates approved by the National Pharmaceutical Pricing Authority. The NPPA, by exercising power vested under the Drugs (Price Control) Order, 1995 fixes ceiling price of drugs. M/s KAPL supplies drugs NPPA rates to KSDL&WL after allowing permissible discounts/rebates. Thus the Department is not only ensrued of quality drugs but also at price fixed by NPPA. |

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೃಂದ ಮತ್ತು ನೇಮಕಾತಿ)

ಪಿ.ಆರ್. ನಂ. 2691

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ–ಭದ್ರಾವತಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆಗೆ (ಪರಿಷ್ಕೃತ–II) ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ನಅಇ/64/ಬೆಂರೂಪ್ರಾ/2009 ದಿನಾಂಕ: 22–05–2010.
2. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಶಿನಪ್ರಾ/ನಯೋ/ಮ.ಯೋ ಪ–II) ತಾ.ಅ/2010–11/121 ದಿನಾಂಕ: 12–09–2011.
3. ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಗ್ರಾಯೋ(14)/ಉನಿ(ವಿ.ವಿ):ಮ.ಯೋ(ಪ. II): ತಾತ್ಕಾಲಿಕ ಶಿವಮೊಗ್ಗ/148: 2011–12 ದಿನಾಂಕ: 28–09–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶಿವಮೊಗ್ಗ–ಭದ್ರಾವತಿ ನಗರಗಳ ಸ್ಥಳೀಯ ಯೋಜನಾ ಪ್ರದೇಶವನ್ನು ಹಾಲಿ ಇದ್ದ 254 ಚ.ಕಿ.ಮೀ.ಗಳಿಂದ 417.28 ಚ.ಕಿ.ಮೀ.ಗೆ ವಿಸ್ತರಿಸಿ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಲಾಗಿದೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರು ಶಿವಮೊಗ್ಗ–ಭದ್ರಾವತಿ ನಗರಗಳ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–II)ಯ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ ಶಿಫಾರಸ್ಸಿನೊಂದಿಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಸಂ. (3)ರಲ್ಲಿ ಓದಲಾದ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಶಿವಮೊಗ್ಗ ನಗರದ ಜನಸಂಖ್ಯೆಯು 2031ಕ್ಕೆ 7,50,000 ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆ (ಪರಿಷ್ಕೃತ–II) ತಯಾರಿಸಲಾಗಿದೆ. ಶಿವಮೊಗ್ಗ–ಭದ್ರಾವತಿ ನಗರಗಳ ಸ್ಥಳೀಯ ಯೋಜನಾ ಪ್ರದೇಶದ 417.28 ಚ.ಕಿ.ಮೀ. ಮಿಸ್ತೀರ್ಣದಲ್ಲಿ ಶಿವಮೊಗ್ಗ ನಗರಕ್ಕೆ ಸಂಬಂಧಿಸಿದಂತೆ 9705.97 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆ (ಪರಿಷ್ಕೃತ–II)ಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಶಿವಮೊಗ್ಗ ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 5091.08 ಹೆಕ್ಟೇರ್ (ಶೇ. 52.45), ವಾಣಿಜ್ಯಕ್ಕಾಗಿ 439.96 ಹೆಕ್ಟೇರ್ (ಶೇ. 4.53), ಕೈಗಾರಿಕೆಗಾಗಿ 544.11 ಹೆಕ್ಟೇರ್ (ಶೇ.5.61) ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 845.39 ಹೆಕ್ಟೇರ್ (ಶೇ.8.71), ಉದ್ಯಾನವನ/ಬಯಲು ಜಾಗಗಳಿಗೆ 1119.12 ಹೆಕ್ಟೇರ್ (ಶೇ.11.53), ನಾಗರೀಕ ಸೌಲಭ್ಯಕ್ಕಾಗಿ 74.97 ಹೆಕ್ಟೇರ್ (ಶೇ.0.77) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 1591.34 ಹೆಕ್ಟೇರ್ (ಶೇ.16.40), ಜಲಾವೃತ ಪ್ರದೇಶವಾಗಿ 695.88 ಹೆಕ್ಟೇರ್, ಒಟ್ಟು 10401.85 ಹೆಕ್ಟೇರ್‌ಗಳು ನಗದೀಕರಣದ ಎಲ್ಲೆಯೆಂದು ನಿಗಧಿಪಡಿಸಲಾಗಿದೆ.

ಭದ್ರಾವತಿ ನಗರದ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಪ್ರದೇಶದಲ್ಲಿ ವಸತಿಗಾಗಿ 1896.58 ಹೆಕ್ಟೇರ್ (ಶೇ.48.77), ವಾಣಿಜ್ಯಕ್ಕಾಗಿ 141.36 ಹೆಕ್ಟೇರ್ (ಶೇ.3.64), ಕೈಗಾರಿಕೆಗಾಗಿ 480.86 ಹೆಕ್ಟೇರ್ (ಶೇ.12.37), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 243.21 ಹೆಕ್ಟೇರ್ (ಶೇ.6.25), ಉದ್ಯನವನ/ಬಯಲು ಜಾಗಗಳಿಗೆ 536.30 ಹೆಕ್ಟೇರ್ (ಶೇ.13.79), ನಾಗರೀಕ ಸೌಲಭ್ಯಕ್ಕಗಿ 18.92 ಹೆಕ್ಟೇರ್ (ಶೇ.0.49) ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 571.24 ಹೆಕ್ಟೇರ್ (ಶೆ.14.69), ಕಾಯ್ದಿರಿಸಿದ್ದು ಜಲಾವೃತ ಪ್ರದೇಶವಾಗಿ 241.88 ಹೆಕ್ಟೇರ್ ಒಳಗೊಂಡಂತೆ ಒಟ್ಟು 4130.27 ಹೆಕ್ಟೇರ್‌ಗಳು ನಗದೀಕರಣದ ಎಲ್ಲೆಯೆಂದು ನಿಗಧಿಪಡಿಸಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–II)ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ಭೂ ಬಳಕೆ ವಲಯ ಮತ್ತು ಅಭಿವೃದ್ಧಿ ನಿಯಂತ್ರಣ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 194 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ: 29–10–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ–ಭದ್ರಾವತಿ ನಗರಗಳ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ–II) 2031ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

1. ಸರ್ಕಾರದ ಅಂತಿಮ ಅಧಿಸೂಚನೆ ಸಂಖ್ಯೆ: ನಅಇ 522 ಮೈಅಪ್ರಾ 2005 ದಿನಾಂಕ: 10–03–2006ರನ್ವಯ ಬಯಲು ಜಾಗ ಮತ್ತು ಪೌರ ಸೌಲಭ್ಯಗಳ ವಿನಾಯಿತಿ ಕುರಿತು ನಿಗದಿಪಡಿಸಿರುವಂತೆ ಗರಿಷ್ಠ ವಿಸ್ತೀರ್ಣವನ್ನು 4,000 ಚ.ಮೀ. (0.40 ಹೆಕ್ಟೇರ್) ಎಂದು ಬದಲಾಯಿಸಿ ತಿದ್ದುಪಡಿಯೊಂದಿಗೆ ಅಂತಿಮ ಅನುಮೋದನೆ ಸಲ್ಲಿಸುವುದು.
2. ಭೂ ಬಳಕೆ ವಲಯ ಮತ್ತು ಅಭಿವೃದ್ಧಿ ನಿಯಂತ್ರಣ ನಿಯಮಾವಳಿಗಳು (ಮಹಾ ಯೋಜನೆ 2031– ಪ–IIರ ಸಂಪುಟ–II) ಪುಟ ಸಂಖ್ಯೆ: 77ರಲ್ಲಿನ special provisions in agricultural zone ಇದರ ವ್ಯಾಖ್ಯಾನದ ಪ್ಯಾರಾವನ್ನು ಕೈಬಿಟ್ಟು ಅಂತಿಮ ಅನುಮೋದನೆಗೆ ಸಲ್ಲಿಸುವುದು.

ಮಹಾಯೋಜನೆಗೆ (ಪರಿಷ್ಕೃತ–II) ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಸವರಾಜ ಬರದೇಲಿ**

ಪಿ.ಆರ್. ನಂ. 2692

ಸರ್ಕಾರದ ಅಧೀನ ಕಾರ್ಯದರ್ಶಿಗಳು (ಪ್ರ)

ನಗರಾಭಿವೃದ್ಧಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಹಂಚಿಕೆಯಾಗಿ, ರದ್ದಪಡಿಸಲಾಗಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಇಂಇ 216 ಎನ್‌ಸಿಇ 2001, ದಿನಾಂಕ : 19–07–2002.
2) ಸರ್ಕಾರದ ಆದೇಶ ಸಂಖ್ಯೆ : ಇಎನ್ 80 ಎನ್‌ಸಿಇ 2008, ದಿನಾಂಕ 22–02–2008.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್‌ಪಿ/08/2029, ದಿನಾಂಕ : 02/03–12–2008.
4) ಕಾರಣ ಕೇಳುವ ನೋಟೀಸು ಸಂಖ್ಯೆ : ಇಎನ್492 ಎನ್‌ಸಿಇ 2008, ದಿನಾಂಕ 27–12–2008.
5) ಸರ್ಕಾರದ ಆದೇಶ ಸಂಖ್ಯೆ : ಇಎನ್ 492 ಎನ್‌ಸಿಇ 2008, ದಿನಾಂಕ 08–05–2009.
6) ಮೆ: ಶ್ರೀ ಸ್ವರ್ಣ ಗ್ರೀನ್ ಪವರ್ ಇವರ ಪತ್ರ ದಿನಾಂಕ 06–07–2009.
7) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/ಎಸ್‌ಎಸ್‌ಆರ್‌ಪಿ–ಎಸ್‌ಆರ್‌ಆರ್/ 2009/2734, ದಿನಾಂಕ 22/24–08–2009, ಸಂಖ್ಯೆ : ಕೆಆರ್‌ಇಡಿ/08/ ಎಸ್‌ಎಸ್‌ಜಿಪಿ/2009/2919, ದಿನಾಂಕ 05/07–09–2009 ಮತ್ತು ಕೆಆರ್‌ಇಡಿ /08/ಎಸ್‌ಜಿಪಿ/2009/3728, ದಿನಾಂಕ 12/13–11–2009.

8) ಸರ್ಕಾರದ ಪತ್ರ ಸಂಖ್ಯೆ : ಇಎನ್ 438 ಎನ್‌ಸಿಇ 2009, ದಿನಾಂಕ 26–12–2009.
9) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/ ಎಸ್‌ಜಿಪಿ/2009/73, ದಿನಾಂಕ 08/12–01–2010.
10) ದಿನಾಂಕ 19–04–2010 ರಂದು ನಡೆದ ರಿವ್ಯೂ ಸಭೆಯ ನಡವಳಿಗಳು.
11) ಸರ್ಕಾರದ ಆದೇಶ ಸಂಖ್ಯೆ : ಇಎನ್ 438 ಎನ್‌ಸಿಇ 2009, ದಿನಾಂಕ 28–02–2011.
12) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/ ಎಸ್‌ಎಸ್‌ಜಿಪಿ/7/ ಮೆ.ವ್ಯಾ/ 2011/2710, ದಿನಾಂಕ 12/13–09–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಗೆ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬೆಳಗಾಂ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಗೆ ಹಂಚಿಕೆಯಾದ ಸಂಪೂರ್ಣ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ವರ್ಗಾವಣೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 7 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 7 ವರ್ಷ ಕಳೆದರೂ ಇದುವರೆಗೂ ಅನುಷ್ಠಾನ ನಿಟ್ಟಿನಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಕಾರಣವನ್ನು ಕೇಳಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this door number return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 7 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ಹಂಚಿಕೆ ಮಾಡಿದ್ದ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿದ್ದ ಒಡಂಬಡಿಕೆಯನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಪ್ರಗತಿ ಸಾಧಿಸಿದ್ದು, ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆಯಬೇಕೆಂದು ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರಗಳಲ್ಲಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡಿದ್ದು, ಒಂದು ವರ್ಷದ ಕಾಲಾವಧಿಯಲ್ಲಿ ವಿದ್ಯುತ್ ಉತ್ಪಾದನೆಯನ್ನು ಪ್ರಾರಂಭಿಸುವುದಕ್ಕಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಪುನಶ್ಚೇತನಗೊಳಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್. ಇವರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಸರ್ಕಾರಿ ಪತ್ರದಲ್ಲಿ ಸದರಿ ಅಭಿವೃದ್ಧಿದಾರರು ಯೋಜನೆಯ ಕುರಿತು ಡಿ.ಪಿ.ಆರ್. ತಯಾರಿಸಿದ್ದಲ್ಲಿ ಅದರ ಪ್ರತಿಯನ್ನು ಒದಗಿಸುವಂತೆ ಕೆ.ಆರ್.ಇ.ಡಿ.ಎಲ್. ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಪತ್ರದೊಂದಿಗೆ ಕೆ.ಆರ್.ಇ.ಡಿ.ಎಲ್. ವ್ಯವಸ್ಥಾಪಕ ನಿರ್ದೇಶಕರು, ಡಿ.ಪಿ.ಆರ್.ನ್ನು ಕಳುಹಿಸಿಕೊಟ್ಟಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರಲ್ಲಿ ನಡೆದ ರಿವ್ಯೂ ಸಭೆಯ ನಿರ್ಣಯವು ಈ ಕೆಳಗಿನಂತಿದೆ:–

"It has a 7 MW capacity Wind Project at Mavinahunda, Belgaum District. The appraisal on the project was made to the committee by GGM, stating that M/s Swarna Green Power obtained 7 MW wind power project under transfer mode and has a valid agreement till 2nd April 2011. Further the company has possessed the private land area about 35 acres. WTG locations are finalized after micro-siting, power evacuation approval obtained and other related work is in progress. The representative of the firm presented in the meeting that the project finance is being arranged and the project will be commissioned by April 2011 and other requirement components of the projects are in the advanced stage.

Referring to the above the committee permitted the firm to develop the project before March 2011 instead of April 2011 and imposed a binding condition, it has to pay a penalty of Rs. 1.00 lakh per MW to KREDL. Project remained un-commissioned by end of March 2011, the amount will be transferred to Akshaya Shakthi Nidhi in KREDL and the project will be cancelled."

ಮೇಲೆ ಓದಲಾದ ಕ್ರಮ ಸಂಖ್ಯೆ (11)ರ ಆದೇಶದಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ರದ್ದುಗೊಳಿಸಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಕಾಲಾವಕಾಶವನ್ನು ದಿನಾಂಕ 30–04–2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ 7.00 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು 18 ತಿಂಗಳುಗಳ ಕಾಲಾವಕಾಶವನ್ನು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 438 ಎನ್‌ಸಿಇ 2009, ಬೆಂಗಳೂರು, ದಿನಾಂಕ: 10–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕೊನೆಯದಾಗಿ ಕಾಲಾವಕಾಶವನ್ನು 01–05–2011 ರಿಂದ 18 ತಿಂಗಳುಗಳ ರವರೆಗೆ ವಿಸ್ತರಿಸಲಾಗಿದೆ:–

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿಆರ್.ನಂ. 2706

## ಇಂಧನ ಸಚಿವಾಲಯ

**ವಿಷಯ :** ಮೆ॥ ಸಾಯಿ ಸಿಮ್ರಿತಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಾಲ್ಲೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-529/Balleshwara MHS/1503, ದಿನಾಂಕ 17/27–05–2011.

2) ದಿನಾಂಕ 27–05–2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸಾಯಿ ಸಿಮ್ರಿತಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪ್ರದೇಶದಲ್ಲಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಲ್ಲೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಸಾಯಿ ಸಿಮ್ರಿತಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 261 ಎನ್‌ಸಿಇ 2011, ಬೆಂಗಳೂರು, ದಿನಾಂಕ : 31–10–2011.**

ಮೆ: ಸಾಯಿ ಸಿಮ್ರಿತಾ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪ್ರದೇಶದಲ್ಲಿ ತುಂಗಾಭದ್ರ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಬಲ್ಲೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Lattitude | Weir Longitude | Power House Latitude | Power House Longitude | FRL (M) | TWL (M) | Design Head | Design Discharge (Cumees) |
|---|---|---|---|---|---|---|---|---|---|---|---|
| M/s. Sai Simrita Power Pvt. Ltd., | Balles h-wara | Honnali Taluk, Davangere Dist. About 7 km down stream of the confluence of the Honnali town. | 2.00 | 14°16' 42'' | 75°38' 52'' | At the toe of the diversion weir | | 543 | 535 | 4.75 | 110 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಅ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2. ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯ ಪ್ರವೃತ್ತರಾಗತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಅದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಅದನ್ನು ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2707

## ಇಂಧನ ಸಚಿವಾಲಯ

**ವಿಷಯ :** ಮೆ॥ ಜೆ.ಎಸ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿವಯೋಗಮಂದಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-776/Cholachagud MHS/1000, ದಿನಾಂಕ 21/28–03–2011 ಮತ್ತು ಕ್ರೆಡಲ್/06/SH-776/Shivayagamandhir- MHS/1433, ದಿನಾಂಕ 19/20–05–2011.

2) ದಿನಾಂಕ 27–05–2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಜೆ.ಎಸ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಶಿವಯೋಗಮಂದಿರ್ ಗ್ರಾಮದ ಪ್ರದೇಶದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿವಯೋಗಮಂದಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಜೆ.ಎಸ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 193 ಎನ್‌ಸಿಇ 2011, ಬೆಂಗಳೂರು, ದಿನಾಂಕ : 31–10–2011.**

ಮೆ: ಜೆ.ಎಸ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಶಿವಯೋಗಮಂದಿರ್ ಗ್ರಾಮದ ಪ್ರದೇಶದಲ್ಲಿ ಮಲಪ್ರಭಾ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಶಿವಯೋಗಮಂದಿರ್ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Lattitude | Weir Longitude | Power House Lattitude | Power House Longitude | FRL (M) | TWL (M) | Design Head | Design Disch-arge (Cum-ees) |
|---|---|---|---|---|---|---|---|---|---|---|---|
| M/s. JSR Power Projects Pvt. Ltd., | Sivayo gaman dir | Badami Taluk, Bagalkot District | 3.00 | 15°54' 50'' | 75°45' 27'' | At the toe of the diversio n weir | | 527 | 516.5 | 10.5 | 34 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಮನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯ ಪ್ರವೃತ್ತರಾಗತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಅದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಅದನ್ನು ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2708

## ಇಂಧನ ಸಚಿವಾಲಯ

**ವಿಷಯ :** ಮೆ॥ ಸಾಯಿ ಅಕ್ಷಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಕೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-532/Harakeri MHS/998, ದಿನಾಂಕ 25/28-03-2011 ಮತ್ತು ಕ್ರೆಡಲ್/06/SH-532/ Harakeri - MHS/1435, ದಿನಾಂಕ 19/20-05-2011.

2) ದಿನಾಂಕ 27-05-2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸಾಯಿ ಅಕ್ಷಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕು, ಹರಕೇರಿ ಗ್ರಾಮದ ಪ್ರದೇಶದಲ್ಲಿ ತುಂಗಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಕೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಸಾಯಿ ಅಕ್ಷಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 191 ಎನ್‌ಸಿಇ 2011, ಬೆಂಗಳೂರು, ದಿನಾಂಕ : 31–10–2011.**

ಮೆ: ಸಾಯಿ ಅಕ್ಷಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಶಿವಮೊಗ್ಗ ತಾಲ್ಲೂಕು, ಹರಕೇರಿ ಗ್ರಾಮದ ಪ್ರದೇಶದಲ್ಲಿ ತುಂಗಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಹರಕೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Lattitude | Weir Longitude | Power House Lattitude | Power House Longitude | FRL (M) | TWL (M) | Design Head | Design Disch-arge (Cum-ees) |
|---|---|---|---|---|---|---|---|---|---|---|---|
| M/s. Sai Aksha Power Projects Pvt. Ltd., | Harakeri | Harakeri village, Shimoga Taluk, & District | 2.00 | 13°53' 42'' | 75°33' 55'' | At the toe of the diversion weir | | 564 | 559 | 4.5 | 68 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯ ಪ್ರವೃತ್ತರಾಗತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಅದನ್ನು ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2709

## ಇಂಧನ ಸಚಿವಾಲಯ

**ವಿಷಯ :** ಮೆ॥ ಲಕ್ಷ್ಮಿ ಅಮೃತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚೋಲಚಗೂಡ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-777/Cholachagud MHS/1434, ದಿನಾಂಕ 19/20–05–2011.

**2)** ದಿನಾಂಕ 27–05–2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಲಕ್ಷ್ಮಿ ಅಮೃತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಚೂಲಚಗೂಡ್ ಗ್ರಾಮದ ಹತ್ತಿರ, ಮಲಪ್ರಭಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚೂಲಚಗೂಡ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಲಕ್ಷ್ಮಿ ಅಮೃತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 194 ಎನ್‌ಸಿಇ 2011, ಬೆಂಗಳೂರು, ದಿನಾಂಕ : 31–10–2011.**

ಮೆ: ಲಕ್ಷ್ಮಿ ಅಮೃತ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕು, ಚೊಲಚಗೂಡ್ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಚೊಲಚಗೂಡ್ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Lattitude | Weir Longitude | Power House Lattitude | Power House Longitude | FRL (M) | TWL (M) | Design Head | Design Disch-arge (Cum-ees) |
|---|---|---|---|---|---|---|---|---|---|---|---|
| M/s. Lakshmi Amritha Power Projects Pvt. Ltd., | Chola c-agud | Badami Taluk, Bagalkot District | 2.00 | 15°53' 38'' | 75°43' 52'' | At the toe of the diversion weir | | 534.1 | 526.9 | 7.2 | 34 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

3. ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯ ಪ್ರವೃತ್ತರಾಗತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

11. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪಿ.ಆರ್. 2710 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಮೆ॥ ಯು.ಎಮ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಬ್ಬೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕ್ರೆಡಲ್/06/SH-772/Abbur MHS/564/ದಿನಾಂಕ : 09/11–02–2011 ಮತ್ತು ಕ್ರೆಡಲ್/06/SH-778/Abbur SHP/2011/1430 ದಿನಾಂಕ : 18/20–05–2011.

2. ದಿನಾಂಕ: 27–05–2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಯು.ಎಮ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕು, ಕೆ. ಅಬ್ಬೂರು ಗ್ರಾಮ ಪ್ರದೇಶದಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಬ್ಬೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಯು.ಎಮ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವಾಟ್ ಸಾಮರ್ಥ್ಯದ ಅಬ್ಬೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 111 ಎನ್‌ಸಿಇ 2011, ಬೆಂಗಳೂರು, ದಿನಾಂಕ: 03 ನೇ ನವೆಂಬರ್ 2011.**

ಮೆ॥ ಯು.ಎಮ್.ಆರ್. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕು, ಕೆ.ಅಬ್ಬೂರು ಗ್ರಾಮ ಪ್ರದೇಶದಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಬ್ಬೂರು ಕಿರು ಜಲ ವಿದ್ಯತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

| Company | MHS | Location | MW | Weir Lattitude | Weir Longitude | Powr House Lattitude | Power House Longitude | FRL (M) | TWL (M) | Design Head | Design Discharge (Cumees) |
|---|---|---|---|---|---|---|---|---|---|---|---|
| M/s. UMR Power Projecdts Pvt. Ltd. | Abbur | Abbur village, Arakalagud Taluk, Hassan District | 2.00 | 12°36' 59" | 75°58' 34" | 12°35' 31" | 75°59' 42" | 840 | 820 | 18 | 12 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್

ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು **3 ವರ್ಷದ** ಅವಧಿಯೊಳಗೆ ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ 3 ವರ್ಷದ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂದಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನಿಡಲಾಗುವುದಿಲ್ಲ.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್.2711

## WATER RESOURCES SECRETARIAT

**Sub :** According Administrative Aproval to the Minor Irrigation Projects under Accelerated Irrigation Benefit Programme-Regarding.

**Read :** 1. Government Order No. Saneeyee 12 Masavi (Tech) 2011 (14), dated : 05-03-2011.

2. Letter No. CEMI(S)/TA-7/AE-1/AIBP/2011-12/3325/, dated 14-10-2011, from the Chief Engineer, Minor Irrigation South Zone, Bangalore.

**Preamble:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the Non-special category states are eligible for inclusion under Accelerated irrigation Benefit Programme (AIBP) effective from December 2006. Karnataka state is classified as one of the Non-special category states. 81 taluks in the state are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the balance estimated cost of the project worked after excluding the previous expenditure and considering the cost of the schemes upto Rs. 1.5 lakh per Ha. The balance cost of the project will have to be borne by the State as state's share.

Administratisve approval was accorded for the following Minor Irrigation scheme vides the Government Order No. Government Order No. SANEEYEE 12 MASAVI (Tech) 2011 (14) Bangalore, dated : 16-07-2010.

| Sl. No. | Name of the Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Detailed estimate for the excavation and construction of other allied works in Y.G. Gudda NTP | Ramanagar | Magadi | 645.00 | 410.00 | 1.21 |
| | **Total** | | | **645.00** | | |

But due to the technical reasons cost of the above estimate is revised and the modified Administrative Approval is sought for as follows.

| Sl. No. | Name of the Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | Excavation and construction of other allied works in Y.G. Gudda NTP | Ramanagar | Magadi | 495.00 | 410.00 | 0.828 |
| | **Total** | | | **495.00** | | |

Hence the following orders are issued.

**Government Order No. SANEEYEE 12 MASAVI (Tech) 2011, Bangalore Dated: 11th November 2011.**

Modified Administrative approval is hereby accorded for taking up the above work with an estimated cost totaling to Rs. 495.00 lakhs (Rupees Four hundred and ninty five lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90 : 10 between the Central Government and State Government.
4. The; Central share is in the form of grant to the state.
5. The projects will be implemented by the Water Resources Department (Minor Irrigation) as per the KTPP Act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in their note No. PWD-890-FC-1/2009 dated 09-12-2009.

By Order and in the name of the Governor of Karnataka,

PR. 2712

**Rudramurthy**

Ex. officio Under Secretary to Government,

Water Resources Department (Minor Irrigation)

## HEALTH AND FAMILY WELFARE SECRETARIAT

**Sub :** Procurement of 1133 computers to PHCs and CHCs – reg.

**Read :** Proceedings of the 7th meeting of the Project Governing Board held on 10-02-2011.

**Preamble:**

A provision has been made under SICF component of the World Bank aided Karnataka Health System Development and Reform Project for strengthening of the PHCs and CHCs by providing computers to capture basic datas from the institutions. Also, in the Procurement Plan, a provision was made to procure 1133 Nos. of Desktops, Printers and UPS to 1133 PHCs and CHCs under International Competitive bidding, World Bank procedure. The Procurement Plan has been approved by the World Bank. The Technical Specification for the above procurement was approved by the Technical Specification Committee. The Procurement Committee meeting chaired by the Commissioner, Health, family Welfare and AYUSH Services held on 7-6-2010 has approved the bidding document and the World Bank has also approved the same on 24-08-2010. Accordingly, an IFB was issued on 15-09-2010 under ICB. In response to this, 3 bids were received and evaluated. Hence, the subject was placed before the Project Governing Board meeting chaired by the Chief Secretary, Government of Karnataka held on 10-02-2011. After detailed discussions, the Board approved for procurement of 1133 desktops, Printers and UPS to 1133 PHCs and CHCs at a total cost of Rs. 4,17,45,384-00 from M/s. Wipro Infotech, Bangalore.

Hence the following order.

**Government Order No. HFW/KHSDRP/Comp. To PHCs & CHCs/17/09-10 Bangalore, Dated: 7th October 2011.**

Under the circumstances mentioned in the preamble, Government are pleased to accord sanction for procurement of 1133 Nos. of Desktops, Printers and UPS to 1133 PHCs and CHCs at a total cost of Rs. 4,17,45,384-00 (Rupees four crores seventeen lakhs fortyfive thousand three hundred eightyfour only) from M/s. Wipro Infotech, Bangalore.

PR. 2713

By Order and in the name of the Governor of Karnataka,
**M. Shashidhar**
Deputy Secretary to Government,
KHSDRP
Health and Family Welfare Department

## INFRASTRUCTURE DEVELOPMENT SECRETARIAT

**Sub :** Project Management services for Construction of Gulbarga Airport – Fees to iDeck.

**Read :** 1. G.O. No. IDD 85 DIA 2008 dated 12-08-2009.
2. Letter No. iDeck/2011-2012/886 dated 16-09-2011.

**Preamble:**

In G.O. read at (1) above, Government has accorded approval for the scope of services and sanction for payment of fees to iDeck for project management services for Gulbarga airport Development Project at the rate not exceeding of Rs. 3,00,000 per month (exclusive of applicable service tax) for the project for a period of twelve months.

In letter read at (2) above, iDeck has stated that construction of Airport has been started only in April/May, 2011 and iDeck has deployed their engineers at site from 01-06-2011 for supervision and sent invoice for Rs. 9,92,700/towards fees payable to iDeck for project management consultancy services for the period June 2011 to August 2011 for the capitioned project and requested for release of an amount of Rs. 9,92,700/.

3. Hence the following order.

**Government Order No. IDD 85 DIA 2008 Bangalore, Dated: 9th November 2011.**

Under the circumstances explained in the preamble, Sanction is accorded for release of Rs. 9,92,700/- (Rupees Nine lakhs ninety-two thousand seven hundred only) towards fees to iDeck for Project Management Services for the Gulbarga Airport Project for the period June 2011 to August 2011.

2. This amount shall be met under the Head of Account 5465-01-190-1-05 (Plan)-211 Development of Minor Airport – Investment out of the provision of Rs. 40.00 Crores during 2011-12.
3. The Chief Financial Officer, ideck is authorized to draw the above amount on a payees receipt duly countersigned by the under secretary to Government, Infrastructure Development, Bangalore.
4. This order issues in accordance with the financial powers delegated to Principal Secretaries/Secretaries to Government vide G.O. No. FD 1 TFP 2008, dated 16-05-2008.

By Order and in the name of the Governor of Karnataka,
**S. J. Sampath Kumar**
Under Secretary to Government,
Infrastructure Development Department

PR. 2714

## INFRASTRUCTURE DEVELOPMENT SECRETARIAT

**Sub :** Construction of RuB at Km 135/500-600 for approach road of Sahakaranagar Colony on Kolar – Bangarpet road in Kolar – Bangarpet section – Release of funds – reg.

**Read :** 1. Letter No. ADM.CR 173 2010-11 dated 09-02-2011 received from the Dy. Commissioner, Kolar district.
2. Letter No. W352/CN/BNC/RoB-RuB GENL dated 12-05-2011 received from Chief Engineer, Construction, SWR, Bangalore.
3. Letter No. DCE/W.352/KOZ-BWT/KTGSS/Dept dated 4-10-2011 received from the Deputy Chief Engineer, (East) Construction, SWR, Bangalore.

**Preamble:**

In the letter read at (1) above, the Deputy Commissioner, Kolar District while enclosing a copy of estimate prepared by the Deputy Chief Engineer, SWR, Bangalore has requested to release grants for construction of Rob for the use of residents of Sahakaranagara, Kolar at an estimated cost of Rs. 7.75 crores.

2. In the letter read at (2) above, the Chief Engineer, SWR, Bangalore has stated that the Kolar Taluk Gruha Nirmana Shaker Sahakara, Kolar was requested for providing RoB for approach to Sahakara Nagara Coplony against the deposit to be made by the State Government and also suggested to approve the proposal for construction of RuB on deposit terms.

3. In the letter date 4-10-2011 read at (3) above, the Deputy Chief Engineer (East) Construction, South Western Railway, Bangalore has stated that the feasibility was examined jointly on 28-09-2011 and after collecting the site details an estimate has been prepared for Rs. 3,37,61,224/- for a subway of span 6x3.65m including approaches and requested to deposit the

amount towards Construction of RuB at Km 135/500-600 for approach road of Sahakaranagar Colony on Kolar – Bangarpet road in Kolar – Bangarpet sections on deposit terms.

4. The proposal of the Deputy Chief Engineer, (East) Construction, SWR, Bangalore has been examined in detail and to consider the proposal for release of Rs. 3,37,61,224-00 lakhs towards Construction of RuB at Km 135/500-600 for approach read of Sahakaranagar Colony on Kolar – Bangarpet road in Kolar – Bangarpet sections under the Head of Account **"5465-01-190-3-04**" (Plan) **211 – K-RIDE ROB/RUB investment** out of the budget provision Rs. 21.49 crore – 2011-12. Hence the following order.

**Government Order No. IDD 11 NSW 2011, Bangalore, Dated: 8th November 2011.**

In the circumstances explained in the preamble, Government of Karnataka is pleased to release Rs. 3,37,61,224-00 lakhs (Rupees Three crores thirty seven lakhs sixty one thousand two hundred and twenty four only) the total amount required to complete the work as submitted by the Dy. Chief engineer, (East), Construction SWR, Bangalore for Construction of RuB at Km 135/500-600 for approach road of Sahakaranagar Colony on Kolar – Bangarpet road in Kolar – Bangarpet sections with the following conditions :-

(i) SWR shall complete the work on-time without requesting further amount.

(ii) GoK will not give any cost escalation of the work.

2. The expenditure shall be met under the Head of Account "5465-01-190-3-04" (Plan) 211-K-RIDE ROB/RUB investment out of the budget provision Rs. 21.49 crore 2011-12.

3. The Chief Executive Officer, K-RIDE is authorized to draw the amount on a payee's receipt ;duly countersigned by the Deputy Secretary/Under Secretary to Government, Infrastructure Development Department and K-RIDE shall in turn deposit the amount with the Financial Advisor and Chief Accounts Officer (Construction), south Western Railway, Bangalore.

4. This order is issued with the concurrence of finance Department vide U.O. Note No. FD 1560 Exp-I/11 dated 22-10-2011.

By Order and in the name of the Governor of Karnataka,

**S. J. Sampath Kumar**

PR. 2715

Under Secretary to Government,

Infrastructure Development Department

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಿಯದರ್ಶಿನಿ ಪ್ರಥಮ ದರ್ಜೆ ಮಹಾವಿದ್ಯಾಲಯ, ರಟ್ಟೀಹಳ್ಳಿ, ಹಿರೇಕೆರೂರು ಕಾಲೇಜು ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 551 ಯುಪಿಸಿ 99, ದಿನಾಂಕ : 07-08-2003.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 30 ಯುಪಿಸಿ 2008 ದಿನಾಂಕ : 13-05-2009
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 30 ಯುಪಿಸಿ 2008 ದಿನಾಂಕ : 05-10-2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:22: ಪ.ಜಾ.ಪ.ಪಂ:ವೇತಾನುದಾನ: ಧಾವಿ: ಖಾಕಾವಿ-2:2010-11, ದಿನಾಂಕ:08-09-2010.
5. ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ:499:2011, ದಿನಾಂಕ:28-10-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ 01-06-1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ 01-06-1987 ರಿಂದ ದಿನಾಂಕ 31-3-1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ 18-02-2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ 01-06-1987 ರಿಂದ 31-03-95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ 13-05-2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ 5-10-2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01-6-1987 ರಿಂದ 31-03-1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ 8-9-2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು

ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 168 ಯುಪಿಸಿ 2010, ಬೆಂಗಳೂರು, ದಿನಾಂಕ: 03 ನೇ ಡಿಸೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01–6–1987 ರಿಂದ 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ **ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕು, ರಟ್ಟಿಹಳ್ಳಿಯ ಪ್ರಿಯದರ್ಶಿನಿ ಪ್ರಥಮ ದರ್ಜೆ ಮಹಾವಿದ್ಯಾಲಯವನ್ನು** ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

ಹಾಗೂ ಸದರಿ ಕಾಲೇಜನ್ನು ಮತ್ತು ಸದರಿ ವಿಷಯಗಳಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು ಹಾಗೂ ಅವರುಗಳು ಬೋಧಿಸುತ್ತಿರುವ ಹುದ್ದೆ/ ವಿಷಯಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ/ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಹೆಚ್.ಬಿ.ಕೆಂಚಳ್ಳಿ | ಇತಿಹಾಸ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 18 ಗಂಟೆ | ಯುಜಿಸಿ |
| 2. | ಸಿ.ಎಸ್.ಕಮ್ಮಾರ | ಕನ್ನಡ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16 ಗಂಟೆ | ಯುಜಿಸಿ |
| 3. | ಡಾ:ಎಂ.ಬಿ.ತಲ್ಲೂರ | ಅರ್ಥಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 18 ಗಂಟೆ | ಯುಜಿಸಿ |
| 4 | ಡಾ:ವೈ.ವೈ. ಮರಳಿ ಹಳ್ಳಿ | ರಾಜ್ಯಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 20 ಗಂಟೆ | ಯುಜಿಸಿ |
| 5. | ವಿ.ಎಸ್.ರೂಳಿ | ಶಿಕ್ಷಣಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 18 ಗಂಟೆ | ಯುಜಿಸಿ |
| 6 | ಆರ್.ವಿ.ರಾಯಣ್ಣವರ | ಭೂಗೋಳಶಾಸ್ತ್ರ ಉಪನ್ಯಾಸಕರು | ಪ.ಜಾತಿ. | 03 | 48 ಗಂಟೆ | ಯುಜಿಸಿ |
| 7 | ಎಂ.ಎಂ.ಪ್ಯಾಟಿ | ಭೂಗೋಳಶಾಸ್ತ್ರ ಉಪನ್ಯಾಸಕರು | ಜಿ.ಪಂ | | | |
| 8. | ಎನ್.ಬಿ.ಲಮಾಣಿ | ಭೂಗೋಳಶಾಸ್ತ್ರ ಉಪನ್ಯಾಸಕರು | ಪ.ಪಂ. | | | |
| 9. | ಸಿ.ಎನ್.ಸೂರಟೂರ | ದೈ.ಶಿ.ಬೋಧಕರು | ಅನ್ವಯಿಸುವುದಿಲ್ಲ | 01 | – | ಯುಜಿಸಿ |
| 10 | ಹೆಚ್. ಶಾಂತಮ್ಮ | ಗ್ರಂಥಪಾಲಕರು | ಅನ್ವಯಿಸುವುದಿಲ್ಲ | 01 | – | ಯುಜಿಸಿ |

1. ಒಂದು ವೇಳೆ ಈ ಆದೇಶದಲ್ಲಿ ವೇತಾನಾನುದಾನಕ್ಕೆ ಒಳಪಟ್ಟ ಬೋಧಕರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

4. ದಿನಾಂಕ 11–07–2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಿಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿ ಬಹುತೇಕ ಉಪನ್ಯಾಸಕರುಗಳು ದಿನಾಂಕ 11–7–2009ರ ಪೂರ್ವದಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ: 11–07–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರುಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ ಪರಿಗಣಿಸಬೇಕು ಎಂಬುದರ ಕುರಿತು ಇಂತಹ ಬೇರೆ ಪ್ರಕರಣಗಳಲ್ಲಿ ಸಿಆಸು ಇಲಾಖೆ / ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗುತ್ತಿದೆ. ಆದುದರಿಂದ, ಒಂದು ವೇಳೆ ಸರ್ಕಾರವು ವೇತದಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಎಂ.ಫಿಲ್. ವಿದ್ಯಾರ್ಹತೆಯನ್ನು ಪ್ರಮಾಣ ಪತ್ರ ವಿತರಿಸುವ ದಿನಾಂಕದಿಂದ ಪರಿಗಣಿಸುವಂತೆ ನಿರ್ಧಾರ ಕೈಗೊಂಡಲ್ಲಿ ಯುಜಿಸಿ ವೇತನ ಶ್ರೇಣಿ ಹಿಂದಕ್ಕೆ ಪಡೆದು ಅಂತಹ ಉಪನ್ಯಾಸಕರುಗಳಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ವೇತನ ಪುನರ್ ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.
5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು / ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.
6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ) ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.
8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು. ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.]
12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗದಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.
13. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಯಾನುದಾನವನ್ನು ನಿಲ್ಲಿಸಲಾಗುವುದು.
14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ : ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಭೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:860/ವೆಚ್ಚ–8/2010, ದಿನಾಂಕ: 28–06–2011 ಮತ್ತು ಆಇ: 956/ವೆಚ್ಚ–8/2010, ದಿನಾಂಕ: 02–07–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಪಿ.ಆರ್. ನಂ. 2757

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ನಡೆಸುತ್ತಿರುವ **ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ಪ್ರಥಮ ದರ್ಜೆ ಮಹಾವಿದ್ಯಾಲಯ** ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99, ದಿನಾಂಕ: 07–08–2003.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 13–05–2009
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05–10–2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:02: ಪ.ಜಾ.ಪ.ಪಂ:ವೇಅನು:ಗುವಿ:2010–11, ಖಾಕಾವಿ–2 ದಿನಾಂಕ:07–09–2010.
5. ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ:499:2011, ದಿನಾಂಕ:28–10–2011.
6. ಸರ್ಕಾರದ ಆದೇಶ ಸಂಖ್ಯೆ: ಇಡಿ 157 ಯುಪಿಸಿ 2010, ದಿನಾಂಕ: 11–11–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ:01–06–1987 ರಿಂದ ದಿನಾಂಕ 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ 01–06–1987 ರಿಂದ 31–03–95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ 13–05–2009ರ ಅಧಿಸೂಚನೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ 5–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01–6–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ 05–10–2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಈಗಾಗಲೇ ಮೇಲೆ ಓದಲಾದ (6)ರ ಆದೇಶದಲ್ಲಿ ಒಳಪಡಿಸಲಾಗಿರುತ್ತದೆ. ಆದರೆ, ದೈಹಿಕ ಶಿಕ್ಷಣ ಬೋಧಕರ ವಿಷಯದಲ್ಲಿ ಪ್ರಸ್ತಾಪಿಸಲಾಗಿದ್ದ ಬೋಧಕರು ನಿಗದಿತ ವಿದ್ಯಾರ್ಹತೆಯನ್ನು ಹೊಂದದೇ ಇದ್ದ ಪ್ರಯುಕ್ತ ಸದರಿ ವಿಷಯವನ್ನು ಹಾಗೂ ಅದನ್ನು ಬೋಧಿಸುತ್ತಿದ್ದ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ತರಲಾಗಿರಲಿಲ್ಲ. ನಂತರದಲ್ಲಿ ದೈಹಿಕ ಶಿಕ್ಷಣ ಬೋಧಕರ ಹುದ್ದೆಗೆ ಪ್ರಸ್ತಾಪಿಸಲಾಗಿದ್ದ ಶ್ರೀ ಹೆಗಡೆ ಮಂಜುನಾಥ ಗಣಪತಿ ಇವರು ಜೂನ್ 2008ರಂದು ಎಂ.ಫಿಲ್. ಪದವಿ ಪಡೆದಿರುವ ಕುರಿತು ಕಾಲೇಜಿನ ಆಡಳಿತ ಮಂಡಳಿಯು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 16–11–2011ರ ಪತ್ರದಲ್ಲಿ ದಾಖಲಾತಿಗಳನ್ನು ಒದಗಿಸಿರುವ

ಹಿನ್ನೆಲೆಯಲ್ಲಿ ಪ್ರಕರಣವನ್ನು ಪುನರ್ ಪರಿಶೀಲಿಸಲಾಗಿ ಶ್ರೀ ಹೆಗಡೆ ಮಂಜುನಾಥ ಗಣಪತಿ ಇವರು ದಿನಾಂಕ: 11–07–2009ರ ಪೂರ್ವದಲ್ಲಿ ಎಂ.ಫಿಲ್. ಪದವಿ ಪಡೆದಿರುವ ಪ್ರಯುಕ್ತ ಒಂದು ದೈಹಿಕ ಶಿಕ್ಷಣ ಭೋಧಕರ ಹುದ್ದೆ ಮಂಜೂರು ಮಾಡಬಹುದಾಗಿರುವುದರಿಂದ, ಶ್ರೀ ಹೆಗಡೆ ಮಂಜುನಾಥ ಗಣಪತಿ ಅವರನ್ನು ಯುಜಿಸಿ ವೇತನ ಶ್ರೇಣಿಯಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 157 ಯುಪಿಸಿ 2010 ಬೆಂಗಳೂರು, ದಿನಾಂಕ: 02–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ **ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ಪ್ರಥಮ ದರ್ಜೆ ಮಹಾವಿದ್ಯಾಲಯವನ್ನು** ಇಲ್ಲಿ ಒಂದು ದೈಹಿಕ ಶಿಕ್ಷಣ ಬೋಧಕರ ಹುದ್ದೆಯನ್ನು ಹಾಗೂ ಸದರಿ ಹುದ್ದೆಯ ಎದುರು ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರನ್ನು ಕೆಳಕಂಡ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ/ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಹೆಗಡೆ ಮಂಜುನಾಥ ಗಣಪತಿ | ದೈಹಿಕ ಶಿಕ್ಷಣ ನಿರ್ದೇಶಕರು | ಅನ್ವಯಿಸುವುದಿಲ್ಲ | 01 | – | ಯುಜಿಸಿ |

1. ಈ ಆದೇಶದಲ್ಲಿ ವೇತಾನುದಾನಕ್ಕೆ ಒಳಪಟ್ಟ ಬೋಧಕರ ಸೇವೆ ಕುರಿತು ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.
4. ದಿನಾಂಕ 11–07–2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಿಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿರುವ ಬೋಧಕರು ದಿನಾಂಕ: 11–07–2009ರ ಪೂರ್ವದಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ:11–07–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರಿಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ ಪರಿಗಣಿಸಬೇಕು ಎಂಬುದರ ಕುರಿತು ಇಂತಹ ಬೇರೆ ಪ್ರಕರಣಗಳಲ್ಲಿ ಸಿಆಸು ಇಲಾಖೆ / ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗುತ್ತಿದೆ. ಆದುದರಿಂದ, ಒಂದು ವೇಳೆ ಸರ್ಕಾರವು ವೇತದಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರ ಎಂ.ಫಿಲ್. ವಿದ್ಯಾರ್ಹತೆಯನ್ನು ಪ್ರಮಾಣ ಪತ್ರ ವಿತರಿಸುವ ದಿನಾಂಕದಿಂದ ಪರಿಗಣಿಸುವಂತೆ ನಿರ್ಧಾರ ಕೈಗೊಂಡಲ್ಲಿ ಯುಜಿಸಿ ವೇತನ ಶ್ರೇಣಿ ಹಿಂದಕ್ಕೆ ಪಡೆದು ಅಂತಹ ಉಪನ್ಯಾಸಕರುಗಳಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ವೇತನ ಪುನರ್ ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.
5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು / ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.
6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ) ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.
8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಧರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35 ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ' ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು. ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.]
12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗದಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.
13. ನಿಗದಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಯಾನುದಾನವನ್ನು ನಿಲ್ಲಿಸಲಾಗುವುದು.
14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ : ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:860/ವೆಚ್ಚ-8/2010, ದಿನಾಂಕ: 28-06-2011 ಮತ್ತು ಆಇ: 859/ವೆಚ್ಚ-8/2010, ದಿನಾಂಕ: 02-07-2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಪಿ.ಆರ್. ನಂ. 2758

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ನಡೆಸುತ್ತಿರುವ **ನವಚೇತನ ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆ** (ರಿ) ಇವರ **ವ್ಯಾಪ್ತಿಯಲ್ಲಿ ಬರುವ ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕಿನ ಪೂರಿಗಾಲಿಯ ಪಿ.ಎಲ್.ಎನ್. ಪ್ರಥಮ ದರ್ಜೆ ಕಲಾ ಕಾಲೇಜು** ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07-08-2003
2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 13-05-2009
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05-10-2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:02: ಪ.ಜಾ.ಪ.ಪಂ:ವೇಅನು:ಗುವಿ:2010-11, ಖಾಕಾವಿ-2, ದಿನಾಂಕ:07-09-2010.
5. ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ:499:2011, ದಿನಾಂಕ:28-10-2011.
6. ಸರ್ಕಾರದ ಆದೇಶ ಸಂಖ್ಯೆ: ಇಡಿ 163 ಯುಪಿಸಿ 2010, ದಿನಾಂಕ: 11-11-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ 01-06-1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ:01–06–1987 ರಿಂದ ದಿನಾಂಕ 31–3–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ 01–06–1987 ರಿಂದ 31–03–95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ 13–05–2009ರ ಅಧಿಸೂಚನೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ 05–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01–6–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ 05–10–2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಈಗಾಗಲೇ ಮೇಲೆ ಓದಲಾದ (6)ರ ಆದೇಶದಲ್ಲಿ ಒಳಪಡಿಸಲಾಗಿರುತ್ತದೆ. ಆದರೆ, ದೈಹಿಕ ಶಿಕ್ಷಣ ಬೋಧಕರ ವಿಷಯದಲ್ಲಿ ಪ್ರಸ್ತಾಪಿಸಲಾಗಿದ್ದ ಬೋಧಕರು ನಿಗಧಿತ ವಿದ್ಯಾರ್ಹತೆಯನ್ನು ಹೊಂದದೇ ಇದ್ದ ಪ್ರಯುಕ್ತ ಸದರಿ ವಿಷಯವನ್ನು ಹಾಗೂ ಅದನ್ನು ಬೋಧಿಸುತ್ತಿದ್ದ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ತರಲಾಗಿರಲಿಲ್ಲ. ನಂತರದಲ್ಲಿ ದೈಹಿಕ ಶಿಕ್ಷಣ ಬೋಧಕರ ಹುದ್ದೆಗೆ ಪ್ರಸ್ತಾಪಿಸಲಾಗಿದ್ದ ಶ್ರೀ ರಮೇಶ. ಆರ್. ಇವರು ಜನವರಿ 2009ರಂದು ಎಂ.ಫಿಲ್. ಪದವಿ ಪಡೆದಿರುವ ಕುರಿತು ಕಾಲೇಜಿನ ಆಡಳಿತ ಮಂಡಳಿಯು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 17–11–2011ರ ಪತ್ರದಲ್ಲಿ ದಾಖಲಾತಿಗಳನ್ನು ಒದಗಿಸಲಾದ ಹಿನ್ನೆಲೆಯಲ್ಲಿ ಪ್ರಕರಣವನ್ನು ಪುನರ್ ಪರಿಶೀಲಿಸಲಾಗಿ ಶ್ರೀ ರಮೇಶ. ಆರ್. ಇವರು ದಿನಾಂಕ: 11–07–2009ರ ಪೂರ್ವದಲ್ಲಿ ಎಂ.ಫಿಲ್. ಪದವಿ ಪಡೆದಿರುವ ಪ್ರಯುಕ್ತ ಒಂದು ದೈಹಿಕ ಶಿಕ್ಷಣ ಬೋಧಕರ ಹುದ್ದೆ ಮಂಜೂರು ಮಾಡಬಹುದಾಗಿರುವುದರಿಂದ, ಶ್ರೀ ರಮೇಶ. ಆರ್. ಅವರನ್ನು ಯುಜಿಸಿ ವೇತನ ಶ್ರೇಣಿಯಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 163 ಯುಪಿಸಿ 2010 ಬೆಂಗಳೂರು, ದಿನಾಂಕ: 02–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ **ನವಚೇತನ ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆ (ರಿ) ಇವರ ವ್ಯಾಪ್ತಿಯಲ್ಲಿ ಬರುವ ಮಂಡ್ಯ ಜಿಲ್ಲೆ ಮಳವಳ್ಳಿ ಪೂರಿಗಾಲಿಯ ಪಿ.ಎಲ್.ಎಸ್. ಪ್ರಥಮ ದರ್ಜೆ ಕಲಾ ಕಾಲೇಜು** ಇಲ್ಲಿ ಒಂದು ದೈಹಿಕ ಶಿಕ್ಷಣ ಬೋಧಕರ ಹುದ್ದೆಯನ್ನು ಹಾಗೂ ಸದರಿ ಹುದ್ದೆಯ ಎದುರು ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರನ್ನು ಕೆಳಕಂಡ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ/ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ರಮೇಶ. ಆರ್. | ದೈಹಿಕ ಶಿಕ್ಷಣ ನಿರ್ದೇಶಕರು | ಅನ್ವಯಿಸುವುದಿಲ್ಲ | 01 | – | ಯುಜಿಸಿ |

1. ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರ ಸೇವೆ ಕುರಿತು ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011, (ತಾಂತ್ರಿಕ) (8) ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ ಹಾಗೂ ತಾಲ್ಲೂಕು ಹಿರೇಮಗಳೂರು ದೊಡ್ಡಕೆರೆಯ ಪುನಶ್ಚೇತನ ಕಾಮಗಾರಿಯ ರೂ. 345.00 ಲಕ್ಷ (ರೂ. ಮೂರು ನೂರ ನಲವತ್ತೈದು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ಕಾಮಗಾರಿಯ ವಿವಿಧ ಹಂತಗಳ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2. ಅಂದಾಜಿಗೆ ತೀರುವಳಿ ನೀಡುವಾಗ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಅಂಶಗಳಂತೆ ಕ್ರಮ ಕೈಗೊಳ್ಳತಕ್ಕದ್ದು.
3. ಯೋಜನೆಯ ಅನುಷ್ಠಾನ ಕುರಿತು 3ನೇ ವ್ಯಕ್ತಿ/ ಸಂಸ್ಥೆಯ ತಪಾಸಣೆಗೆ ಒಳಪಡಿಸಿ, ವರದಿಯನ್ನು ಪಡೆಯುವುದು.
4. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
5. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
6. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
7. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
8. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
9. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪಿ.ಆರ್. ನಂ. 2827

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಹಾಸನ ಜಿಲ್ಲೆ ಹಾಗೂ ತಾಲ್ಲೂಕು ಸತ್ಯಮಂಗಲ ದೊಡ್ಡ ಕೆರೆಯ ಅಭಿವೃದ್ಧಿ ಕಾಮಗಾರಿಯ ಅಂದಾಜಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010 ದಿನಾಂಕ: 28.09.2011.

**2)** ದಿನಾಂಕ: 19.10.2011ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ ಮುಸದ/ತಾಂ.ಸ-7/ಸ.ಇಂ. 15/13ನೇ ಹಣಕಾಸು/ 2011-12/3656.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹದಿಮೂರನೇ ಹಣಕಾಸು ಆಯೋಗದಡಿ ರೂ 350.00 ಕೋಟಿ ಅಂದಾಜು ವೆಚ್ಚದ 631 ಕಾಮಗಾರಿಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಇದರಲ್ಲಿ ರೂ. 430.00 ಲಕ್ಷಗಳ ಅಂದಾಜುಮೊತ್ತದ ಹಾಸನ ಜಿಲ್ಲೆ ಹಾಗೂ ತಾಲ್ಲೂಕು ಸತ್ಯಮಂಗಲ ದೊಡ್ಡ ಕೆರೆಯ ಅಭಿವೃದ್ಧಿ ಕಾಮಗಾರಿಯು ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011-12ನೇ ಸಾಲಿಗೆ ಮುಂದುವರೆಸಿರುವ 2010-11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದೆ. ಇದರಲ್ಲಿ ಕೆರೆಯ ಅಂಗಳದಲ್ಲಿ ಹೂಳೆತ್ತುವುದು, ಏರಿ ಕಾಮಗಾರಿ, ಚೈನ್ ಲಿಂಕ್ ಫೆನ್ಸಿಂಗ್, ಕೋಡಿ ಹಳ್ಳಕ್ಕೆ ಸೇತುವೆ ನಿರ್ಮಾಣ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಮಾಡಿದೆ. ಈ ಕಾಮಗಾರಿಯ ಅಂದಾಜಿಗೆ ದಿನಾಂಕ 12-10-2011ರಂದು ನಡೆದಿರುವ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ಕೆಲವು ಷರಾಗಳೊಂದಿಗೆ ತೀರುವಳಿ ನೀಡಲಾಗಿದೆ.

ಲೆಕ್ಕಶೀರ್ಷಿಕೆ "4702-00-101-1-12-059-XIII ನೇ ಆ ಆ ಅನುದಾನ ಕೃಷಿಗೆ ನೇರವಾಗಿ ಸಂಬಂಧಿಸಿದ ಕೆರೆ ನೀರಾವರಿ ಯೋಜನೆಗಳ ಜೀರ್ಣೋದ್ಧಾರ-ಇತರ ಖರ್ಚುಗಳು" ರಡಿ ರೂ 430.00 ಲಕ್ಷಗಳ ಅಂದಾಜುಮೊತ್ತದ ಈ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011, (ತಾಂತ್ರಿಕ) (6) ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2011.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ ಹಾಗೂ ತಾಲ್ಲೂಕು ಸತ್ಯಮಂಗಲ ದೊಡ್ಡಕೆರೆಯ ಅಭಿವೃದ್ಧಿ ಕಾಮಗಾರಿಯ ರೂ. 430.00 ಲಕ್ಷ (ರೂ. ನಾಲ್ಕು ನೂರ ಮುವತ್ತು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ಹಾಗೂ ಕಾಮಗಾರಿಯ ವಿವಿಧ ಹಂತಗಳ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
2. ಅಂದಾಜಿಗೆ ತೀರುವಳಿ ನೀಡುವಾಗ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಗಮನಿಸಿರುವ ಅಂಶಗಳಂತೆ ಕ್ರಮ ಕೈಗೊಳ್ಳತಕ್ಕದ್ದು.
3. ಯೋಜನೆಯ ಅನುಷ್ಠಾನ ಕುರಿತು 3ನೇ ವ್ಯಕ್ತಿ/ ಸಂಸ್ಥೆಯ ತಪಾಸಣೆಗೆ ಒಳಪಡಿಸಿ, ವರದಿಯನ್ನು ಪಡೆಯುವುದು.
4. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
5. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
6. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
7. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
8. ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
9. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
10. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
11. ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2828

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಹತ್ತರಗಾ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011-12/5008, ದಿನಾಂಕ: 26–09–2011.

**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(5) ದಿನಾಂಕ: 16–07–2010.

**ಪ್ರಸ್ತಾವನೆ :**

ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಹತ್ತರಗಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕಾಮಗಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 09–05–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 13–05–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಭಾಗವಹಿಸಿದ್ದ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 01–08–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,20,73,359/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,83,21,236/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಧನರಾಜ ತಾಳಂಪಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು | 2,95,06,236/– | 33.67 ಹೆಚ್ಚು | 4.184 ಹೆಚ್ಚು |

ಮೇಲ್ಕಂಡಂತೆ ಶ್ರೀ ಧನರಾಜ ತಾಳಂಪಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನ ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 4.184 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,83,21,236/–ಗಳ ಮೇಲೆ ಶೇ. 4.184 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,95,06,236/– ಗಳಿಗೆ ಅನಿಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 72 ಅಪಿಬಿಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 22–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಹತ್ತರಗಾ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,83,21,236/–ಗಳ ಮೇಲೆ ಶೇ. 4.184 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,95,06,236/– (ರೂ. ಎರಡು ಕೋಟಿ ತೊಂಭತ್ತೈದು ಲಕ್ಷ ಆರು ಸಾವಿರದ ಇನ್ನೂರ ಮೂವತ್ತಾರು ಮಾತ್ರ)ಗಳಿಗೆ ಶ್ರೀ ಧನರಾಜ ತಾಳಂಪಳ್ಳಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2836 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ ಹಿರೇಕೆರೂರ ತಾಲ್ಲೂಕಿನ ಚಿಕ್ಕೊಣತಿ ಕೆರೆ ಪ್ರವಾಹ ಹಾನಿ ದುರಸ್ತಿ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ

**ಓದಲಾಗಿದೆ :** 1. ಮುಖ್ಯ ಇಂಜೀನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ) ವಲಯ/ಬಿಜೆಪಿ/ಎಇ–3/2011–12/5237, ದಿನಾಂಕ: 12–10–2011.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ಚಿಕ್ಕೊಣತಿ ಕೆರೆ ಪ್ರವಾಹ ಹಾನಿ ದುರಸ್ತಿ ಕಾಮಗಾರಿಯ ಅಂದಾಜಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯರವರ ಕಛೇರಿ ನೊಂದಣಿ ಸಂಖ್ಯೆ: 13/2011–12ರಡಿ ತಾಂತ್ರಿಕ ಮಂಜೂರಾತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಾಲದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 05–07–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 08–07–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 08–07–2011 |
| ವಿಜಯ ಕರ್ನಾಟಕ ದಿನಪತ್ರಿಕೆ | 09–07–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 24–08–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್ ಇಡಲಾದ ಮೊತ್ತ | ರೂ. 1,42,82,350/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,42,55,911/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಎನ್. ದಿನೇಶ್, ಒಂದನೇ ದರ್ಜೆ ಗುತ್ತಿಗೆದಾರರು | 1,51,23,911/– | 5.89 ಹೆಚ್ಚು | 6.09 ಹೆಚ್ಚು |

ಮೇಲ್ಕಂಡಂತೆ ಶ್ರೀ ಎನ್. ದಿನೇಶ್ ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನ ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.09 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,42,55,911/– ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,51,11,266/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 08 ಪ್ರನೀಕಾ 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 19–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ಚಿಕ್ಕೊಣತಿ ಕೆರೆ ಪ್ರವಾಹ ಹಾನಿ ದುರಸ್ತಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,42,55,911/–ಗಳ ಮೇಲೆ ಶೇ. 6.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,51,11,266/– (ರೂ. ಒಂದು ಕೋಟಿ ಐವತ್ತೊಂದು ಲಕ್ಷ ಹನ್ನೊಂದು ಸಾವಿರದ ಇನ್ನೂರ ಅರವತ್ತಾರು ಮಾತ್ರ)ಗಳಿಗೆ ಶ್ರೀ ಎನ್. ದಿನೇಶ್ ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2837 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಫಾಕಲ್ ಗ್ರಾಮದ ಹತ್ತಿರ (ಸೈಟ್–2) ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ

**ಓದಲಾಗಿದೆ :** 1. ಮುಖ್ಯ ಇಂಜೀನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2011–12/5401,ದಿನಾಂಕ:24–10–2011.

**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(18) ದಿನಾಂಕ: 09–07–2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಫಾಕಲ್ ಗ್ರಾಮದ ಹತ್ತಿರ (ಸೈಟ್–2) ಹೊಸಕೆರೆ ಕಾಮಗಾರಿ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 16–07–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 30–07–2011 |
| ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ | 14–07–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 13–09–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್ ಇಡಲಾದ ಮೊತ್ತ | ರೂ. 3,62,02,583/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,66,93,130/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್ ಪ್ರೈ.ಲಿ. ಒಂದನೇ ದರ್ಜೆ ಗುತ್ತಿಗೆದಾರರು | 3,93,49,486/– | 8.692 ಹೆಚ್ಚು | 7.239 ಹೆಚ್ಚು |

ಮೇಲ್ಕಂಡಂತೆ ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್ ಪ್ರೈ.ಲಿ. ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.239 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸ್ ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 15–11–2011ರ ಪತ್ರದಲ್ಲಿ ಕೆಲಸಕ್ಕೆ ಅಗತ್ಯವಿರುವ ಜಲ್ಲಿ, ಮರಳು ಇತ್ಯಾದಿ ಸಮೀಪದಲ್ಲಿ ಲಭ್ಯವಿರುವುದಿಲ್ಲಾ, ಸೆಮೇಂಟ್, ಉಕ್ಕಿನ ದರಗಳು ಹಾಗೂ ಕೂಲಿ ಕಾರ್ಮಿಕರ ದರಗಳಲ್ಲಿ ಹೆಚ್ಚಳವಾಗಿರುವುದಾಗಿ ತಿಳಿಸುತ್ತಾ ಅವರು ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ ತಿಳಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,66,93,130/– ಗಳ ಮೇಲೆ ಶೇ. 7.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,92,61,649/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 13 ಹೊಕೆನಿ 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 19–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಸೇಡಂ ತಾಲ್ಲೂಕಿನ ಫಾಕಲ್ ಗ್ರಾಮದ ಹತ್ತಿರ (ಸೈಟ್–2) ಹೊಸಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 3,66,93,130/–ಗಳ ಮೇಲೆ ಶೇ. 7.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,92,61,649/– (ರೂ. ಮೂರು ಕೋಟಿ ತೊಂಭತ್ತೆರಡು ಲಕ್ಷ ಅರವತ್ತೊಂದು ಸಾವಿರದ ಆರು ನೂರು ನಲವತ್ತೊಂಭತ್ತು ಮಾತ್ರ). ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್ ಪ್ರೈ.ಲಿ ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2838

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಪುರುಜ್ಜೀವನ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ

**ಓದಲಾಗಿದೆ :** 1. ಮುಖ್ಯ ಇಂಜೀನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/5484, ದಿನಾಂಕ: 26–10–2011.

**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2010 ದಿನಾಂಕ: 27–11–2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಪುರುಜ್ಜೀವನ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ನಬಾರ್ಡ್‌ನ ಆರ್.ಐ.ಡಿ.ಎಫ್.–16ರಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಎರಡನೇ ಬಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 29–09–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 30–10–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 04–10–2011 |
| ಕನ್ನಡ ಪ್ರಭ ದಿನಪತ್ರಿಕೆ | 07–10–2011 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 04–10–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 24–10–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್ ಇಡಲಾದ ಮೊತ್ತ | ರೂ. 5,58,07,063/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 559,00,313/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಶ್ರೀ ಜಿ. ಮಸ್ತಾನಯ್ಯ ಒಂದನೇ ದರ್ಜೆ ಗುತ್ತಿಗೆದಾರರು | 6,40,77,945/– | 14.82 ಹೆಚ್ಚು | 14.63 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ. ಮಸ್ತಾನಯ್ಯ ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.63 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸ್ ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ: 03–11–2011ರ ಪತ್ರದಲ್ಲಿ ಕೆಲಸಕ್ಕೆ ಅಗತ್ಯವಿರುವ ಗುಣಮಟ್ಟದ ಗ್ರಾವೆಲ್ ಹಾಗೂ ಇತರ ಸಾಮಗ್ರಿಗಳ ದರಗಳಲ್ಲಿ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಹೆಚ್ಚಳವುಂಟಾಗಿರುವುದರಿಂದ ಕಾಮಗಾರಿಯ ನಿರ್ವಹಣೆಯಲ್ಲಿ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುವುದಾಗಿ ತಿಳಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 5,59,00,313/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,37,26,357/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 45 ಕೆಜಿದು 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 19–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ಪುರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 5,59,00,313/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,37,26,357/–ಗಳಿಗೆ (ರೂ. ಆರು ಕೋಟಿ ಮೂವತ್ತೇಳು ಲಕ್ಷ ಇಪ್ಪತ್ತಾರು ಸಾವಿರದ ಮುನ್ನೂರು ಐವತ್ತೇಳು ಮಾತ್ರ) ಗಳಿಗೆ ಶ್ರೀ ಜಿ. ಮಸ್ತಾನಯ್ಯ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2839

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಆಲೂರು ಕೆ.ಎಂ. (ಶಿಡ್ಲಗೊಂಡ) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ

**ಓದಲಾಗಿದೆ :** 1. ಮುಖ್ಯ ಇಂಜೀನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/5124 ,ದಿನಾಂಕ: 03–10–2011.

**2.** ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009 (1) ದಿನಾಂಕ: 03–04–2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಆಲೂರು ಕೆ.ಎಂ. (ಶಿಡ್ಲಗೊಂಡ) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ

ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕಾಮಗಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06–08–2011 |
| ಜಿಲ್ಲಾಟೆಂಡರ್ ಬುಲೆಟಿನ್ | 08–08–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 08–08–2011 |
| ಪ್ರಜಾವಾಣಿ ದಿನಪತ್ರಿಕೆ | 08–08–2011 |
| ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | 08–08–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಭಾಗವಹಿಸಿದ್ದ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 12–09–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್ ಇಡಲಾದ ಮೊತ್ತ | ರೂ. 1,32,48,494/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,62,73,508/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಶ್ರೀ ಎ.ಎಸ್. ಸವಸುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು | 1,97,20,924/– | 48.85 ಹೆಚ್ಚು | 21.18 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಸವಸುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 21.18 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸ್ ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,62,73,508/– ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,83,07,697/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 09 ಹೊಕೆನಿ 2011 (ತಾಂತ್ರಿಕ) ಬೆಂಗಳೂರು, ದಿನಾಂಕ : 19–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಆಲೂರ ಕೆ.ಎಂ. (ಶಿಡ್ಲಗೊಂಡ) ಗ್ರಾಮದ ಹತ್ತಿರ ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,62,73,508/–ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,83,07,697/–ಗಳಿಗೆ (ರೂ. ಒಂದು ಕೋಟಿ ಎಂಭತ್ತಮೂರು ಲಕ್ಷ ಏಳು ಸಾವಿರದ ಆರು ನೂರ ತೊಂಭತ್ತೇಳು ಮಾತ್ರ) ಗಳಿಗೆ ಶ್ರೀ ಎ.ಎಸ್. ಸವಸುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2840

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸುನ್ನಾಳ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/5126, ದಿನಾಂಕ 03–10–2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (4), ದಿನಾಂಕ 09–7–2010.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸುನ್ನಾಳ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 05–07–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 04–07–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 23–07–2011 |
| ವಿಜಯ ಕರ್ನಾಟಕ ದಿನಪತ್ರಿಕೆ | 22–07–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಭಾಗವಹಿಸಿದ್ದು, ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 07–09–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,37,83,415/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,69,28,435/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಾಬುಗೌಡಾ ಮಲ್ಲನಗೌಡಾ ಪಾಟೀಲ, ಒಂದನೇ ದರ್ಜೆ ಗುತ್ತಿಗೆದಾರರು | 2,07,83,896/– | 50.79 ಹೆಚ್ಚು | 22.78 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಾಬುಗೌಡಾ ಮಲ್ಲನಗೌಡಾ ಪಾಟೀಲ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.78 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 02–11–2011ರ ಪತ್ರದಲ್ಲಿ ಕಚ್ಚಾ ಸಾಮಗ್ರಿಗಳ ದರಗಳಲ್ಲಿ, ಸಾಗಣೆ ದರಗಳಲ್ಲಿ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಉಂಟಾಗಿರುವ ಹೆಚ್ಚಳವನ್ನು ಪರಿಗಣಿಸಿ ಹಾಗೂ ಕೆಲಸಕ್ಕೆ ಅವಶ್ಯವಿರುವ ಕಚ್ಚಾ ಸಾಮಗ್ರಿಗಳನ್ನು ದೂರದಲ್ಲಿ ಸಂಗ್ರಹಿಸಿ ಕನಿಷ್ಟ 500 ಮೀ.ನಷ್ಟು ದೂರದಿಂದ ತಲೆಮೇಲೆ ಸಾಗಿಸಬೇಕೆಂದು ತಿಳಿಸಿ ಅವರು ನಮೂದಿಸಿದ ದರಗಳು ಸಮಂಜಸವಾಗಿರುವುದಾಗಿ ತಿಳಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,69,28,435/– ಗಳ ಮೇಲೆ ಶೇಕಡ 13.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,91,29,132/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 73 ಅಪಿಬಂ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 19ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸುನ್ನಾಳ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,69,28,435/– ಗಳ ಮೇಲೆ ಶೇಕಡ 13.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,91,29,132/–ಗಳಿಗೆ (ರೂ. ಒಂದು ಕೋಟಿ ತೊಂಭತ್ತೊಂದು ಲಕ್ಷ ಇಪ್ಪತ್ತೊಂಭತ್ತು ಸಾವಿರದ ಒಂದು ನೂರ ಮೂವತ್ತೆರಡು ಮಾತ್ರ) ಗಳಿಗೆ ಶ್ರೀ ಬಾಬುಗೌಡಾ ಮಲ್ಲನಗೌಡಾ ಪಾಟೀಲ, ಒಂದನೇ ದರ್ಜೆ ಗುತ್ತಿಗೆದಾರರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2841

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಆರ್.ಆರ್.ಆರ್. ಯೋಜನೆಯಡಿ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕಿನಲ್ಲಿ ಸಣ್ಣ ನೀರಾವರಿ ಕೆರೆಗಳ ಸುಧಾರಣೆ ಕಾಮಗಾರಿಯ (ಪ್ಯಾಕೇಜ್–1) ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–1/2011–12/4980, ದಿನಾಂಕ 26–09–2011.

**ಪ್ರಸ್ತಾವನೆ :**

ಮೇಲ್ಕಂಡ ಟೆಂಟರ್ ಪ್ಯಾಕೇಜ್‌ನಲ್ಲಿನ ಬೆಳಗಾವಿ ತಾಲ್ಲೂಕಿನ 03 ಕಾಮಗಾರಿಗಳು ಕೇಂದ್ರ ಸರ್ಕಾರದಿಂದ ಆರ್.ಆರ್. ಮತ್ತು ಆರ್. ಯೋಜನೆಯಡಿಯಲ್ಲಿ ಅನುಮೋದನೆ ನೀಡಲಾಗಿರುವ 374 ಕಾಮಗಾರಿಗಳಲ್ಲಿ ಸೇರಿರುತ್ತವೆ. ಕಾಮಗಾರಿಯ ವಿವರಗಳು ಕೆಳಕಂಡಂತಿವೆ.

| ಕಾಮಗಾರಿಯ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಅನುಮೋದಿಸಿದ ಮೊತ್ತ ಹಾಗೂ ತಾಂತ್ರಿಕ ಮಂಜೂರಾತಿಯ ನೋಂದಣಿ ಸಂಖ್ಯೆ |
|---|---|---|---|
| ಮತ್ಯಾನಟ್ಟಿ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 46.00 | ಅಧೀಕ್ಷಕ ಇಂಜಿನಿಯರ್, ಸ.ನೀ. ವೃತ್ತ, ಬೆಳಗಾವಿ | ರೂ. 46.00 ಲಕ್ಷ ಸಂಖ್ಯೆ : 25/06–2010 |
| ಮಾರಿಹಾಳ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 49.75 | ಅಧೀಕ್ಷಕ ಇಂಜಿನಿಯರ್, ಸ.ನೀ. ವೃತ್ತ, ಬೆಳಗಾವಿ | ರೂ. 49.75 ಲಕ್ಷ ಸಂಖ್ಯೆ : 24/06–2010 |
| ಬಸುರ್ತಿ ಗ್ರಾಮದ ಹತ್ತಿರ ಕೆರೆ ಸುಧಾರಣೆ ಕಾಮಗಾರಿ | 29.00 | ಅಧೀಕ್ಷಕ ಇಂಜಿನಿಯರ್, ಸ.ನೀ. ವೃತ್ತ, ಬೆಳಗಾವಿ | ರೂ. 29.00 ಲಕ್ಷ ಸಂಖ್ಯೆ : 16/06–2010 |
| **ಒಟ್ಟು** | **124.75** | | |

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 01–08–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 30–07–2011 |
| ವಿಜಯ ಕರ್ನಾಟಕ ದಿನಪತ್ರಿಕೆ | 31–07–2011 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 31–07–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 12–09–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 99,54,477/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,22,39,576/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ ಹಾಗು | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಚೆನ್ನಪ್ಪ, ಎಂ. ನರಸಣ್ಣವರ, ಪ್ರಥಮ ದರ್ಜೆ ಗುತ್ತಿಗೆದಾರರು | 1,44,64,498/– | 45.31 ಹೆಚ್ಚು | 18.18 ಹೆಚ್ಚು |

ಮೇಲ್ಕಂಡಂತೆ ಶ್ರೀ ಚೆನ್ನಪ್ಪ, ಎಂ. ನರಸಣ್ಣವರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.18 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 22–10–2011ರ ಪತ್ರದಲ್ಲಿ ಕಚ್ಚಾ ಸಾಮಗ್ರಿಗಳ ದರಗಳಲ್ಲಿ, ಸಾಗಣೆ ದರಗಳಲ್ಲಿ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಉಂಟಾಗಿರುವ ಹೆಚ್ಚಳವನ್ನು ಪರಿಗಣಿಸಿ ಅವರು ನಮೂದಿಸಿರುವ ದರಗಳು ಸಮಂಜಸವಾಗಿರುವುದಾಗಿ ತಿಳಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,22,39,576/– ಗಳ ಮೇಲೆ ಶೇಕಡ 12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,37,08,325/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 29 ಕೆಜಿದು 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 19ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್.ಆರ್.ಆರ್. ಯೋಜನೆಯಡಿ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕಿನಲ್ಲಿ ಸಣ್ಣ ನೀರಾವರಿ ಕೆರೆಗಳ ಸುಧಾರಣೆ (ಪ್ಯಾಕೇಜ್–1) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,22,39,576/– ಗಳ ಮೇಲೆ ಶೇಕಡ 12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,37,08,325/–ಗಳಿಗೆ (ರೂ. ಒಂದು ಕೋಟಿ ಮೂವತ್ತೇಳು ಲಕ್ಷ ಎಂಟು ಸಾವಿರದ ಮೂನ್ನೂರ ಇಪ್ಪತ್ತೈದು ಮಾತ್ರ) ಗಳಿಗೆ ಶ್ರೀ ಚೆನ್ನಪ್ಪ, ಎಂ. ನರಸಣ್ಣವರ, ಒಂದನೇ ದರ್ಜೆ ಗುತ್ತಿಗೆದಾರರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 2842

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಔರಾದ ತಾಲ್ಲೂಕಿನ ಆಲೂರ ಬೇಲೂರ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ (ಬಾಕೀ ಕಾಮಗಾರಿ) ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2011–12/5305, ದಿನಾಂಕ 15–10–2011.

2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009 (2), ದಿನಾಂಕ 16–7–2010.

**ಪ್ರಸ್ತಾವನೆ :**

ಬೀದರ್ ಜಿಲ್ಲೆ, ಔರಾದ ತಾಲ್ಲೂಕಿನ ಆಲೂರ ಬೇಲೂರ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ (ಬಾಕೀ ಕಾಮಗಾರಿ) ಕಾಮಗಾರಿ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕಾಮಗಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 09–05–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 13–05–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಭಾಗವಹಿಸಿದ್ದ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 1–08–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 5,34,46,511/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 6,31,92,229/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು | 7,28,12,792/– | 36.235 ಹೆಚ್ಚು | 15.224 ಹೆಚ್ಚು |

ಮೇಲ್ಕಂಡಂತೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.224 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂದಾನದ ಮೂಲಕ ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ದಿನಾಂಕ 11-11-2011 ಪತ್ರದಲ್ಲಿ ಈ ಕಾಮಗಾರಿಯಲ್ಲಿ ಸುಮಾರು 19 ಕಿ.ಮೀ. ಉದ್ದದ ನಾಲೆ ಕೆಲಸವನ್ನು ನಿರ್ವಹಿಸಬೇಕಾಗಿದ್ದು ಕೂಲಿ ಕಾರ್ಮಿಕರನ್ನು ಮತ್ತು ಕಚ್ಚಾ ಸಾಮಗ್ರಿಗಳನ್ನು ಸ್ಥಳದಿಂದ ಸ್ಥಳಕ್ಕೆ ಬದಲಾಹಿಸಬೇಕಾಗಿದೆಯೆಂದು, ಸಾಮಗ್ರಿಗಳ ಸಾಗಣೆ ದರಗಳ, ಕೂಲಿ ಕಾರ್ಮಿಕರ ಭತ್ಯೆಯಲ್ಲಿ ಹೆಚ್ಚಳ ಆಗಿರುವುದಾಗಿ ತಿಳಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 6,31,92,229/– ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,20,39,141/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 11 ಹೊಕೆನಿ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 19ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ, ಔರಾದ ತಾಲ್ಲೂಕಿನ ಆಲೂರ ಬೇಲೂರ ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣ (ಬಾಕೀ ಕಾಮಗಾರಿ) ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 6,31,92,229/– ಗಳ ಮೇಲೆ ಶೇಕಡ 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 7,20,39,141/–ಗಳಿಗೆ (ರೂ. ಏಳು ಕೋಟಿ ಇಪ್ಪತ್ತು ಲಕ್ಷ ಮೂವತ್ತೊಂಭತ್ತು ಸಾವಿರದ ಒಂದು ನೂರ ನಲವತ್ತೊಂದು ಮಾತ್ರ) ಗಳಿಗೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 2843

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮೈಸೂರು ನಗರದಲ್ಲಿ ಗಣಿ ಮತ್ತು ಭೂ ವಿಜ್ಞಾನ ಕಛೇರಿಯ ಕಟ್ಟಡ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 80 ಮಸಾವಿ 2011 (ತಾಂತ್ರಿಕ), ದಿನಾಂಕ 18-6-2011

2. ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ರವರ ಪತ್ರದ ಕ್ರಮಾಂಕ : ಗಭೂಇ/ ಅಜವಿ/ಕಛೇರಿ ಕಟ್ಟಡ/2011-12/5153, ದಿನಾಂಕ 30-11-2011.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 124 ಮಸಾವಿ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 01ನೇ ಡಿಸೆಂಬರ್ 2011**

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ವಿವರಿಸಿರುವ ಸಂದರ್ಭದಲ್ಲಿ ಸರ್ಕಾರದ ಆದೇಶ ಸಂಖ್ಯೆ : ಸನೀಈ 80 ಮಸಾವಿ 2011 (ತಾಂತ್ರಿಕ) ದಿನಾಂಕ 18-06-2011 ರಲ್ಲಿ ಮೈಸೂರು ನಗರದಲ್ಲಿ ಗಣಿ ಮತ್ತು ಭೂ ವಿಜ್ಞಾನ ಕಛೇರಿಯ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಅನುಮೋದಿಸಿದ್ದ ಟೆಂಡರ್‌ರನ್ನು ರದ್ದುಗೊಳಿಸಿ ಮತ್ತು ಟೆಂಡರ್ ಕರೆಯಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪಿ.ಆರ್. 2844

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ದಿನಾಂಕ 24-08-11ರ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಬಿಜೆಪಿ/ಭೂಸ್ವಾಪ್ರ/2011-12/4506.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 28–12–2000.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 07–04–2003.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ಮುದ್ದೇಬಿಹಾಳ ಇಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ : 14/04 ಅನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 06–10–10 ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,09,800/–ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 32 ಎಲ್‌ಸಿಬಿ 2011, ದಿನಾಂಕ 22–10–2011 ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಮಾದಿನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 14/04 | 93 | 2–01 | 5,70,825–00 |
| | | | **ಒಟ್ಟು** | **5,70,825–00** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 122 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 02ನೇ ಡಿಸೆಂಬರ್ 2011**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಮಾದಿನಾಳ ಗ್ರಾಮದ ವಸರು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾದಿನಾಳ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್ 93ರ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ರೂ. 5,70,825–00 ಗಳನ್ನು (ಐದು ಲಕ್ಷದ ಎಪ್ಪತ್ತು ಸಾವಿರದ ಎಂಟನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.5,70,825–00/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 2845

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆ ಮತ್ತು ತಾಲ್ಲೂಕು ಹುಲಿಕೇರಿ ಸಣ್ಣ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04–01–11ರ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಭೂಸ್ವಾಪ್ರ/2011–12/36.

**ಪ್ರಸ್ತಾವನೆ :**

ಧಾರವಾಡ ಜಿಲ್ಲೆ ಮತ್ತು ತಾಲ್ಲೂಕು ಹುಲಿಕೇರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲಿಕೇರಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 04-01-2011ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 20–12–1979.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 03–11–1982.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಧಾರವಾಡ ಹೆಚ್ಚುವರಿ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ : 1/08 ಅನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆ ಜಮೀನಿಗೆ ರೂ. 15,000/–ಗಳಂತೆ ನಿಗದಿಪಡಿಸಿ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 237/01 | 6/2 | ಹುಲಿಕೇರಿ | 3–00 | 2,65,895–00 |
| | | | | ಒಟ್ಟು | **2,65,895–00** |

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 49 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 18ನೇ ನವೆಂಬರ್ 2011**

ಧಾರವಾಡ ಜಿಲ್ಲೆ ಮತ್ತು ತಾಲ್ಲೂಕು ಹುಲಿಕೇರಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹುಲಿಕೇರಿ ಗ್ರಾಮಕ್ಕೆ ಸೇರಿದ 6/2ರ ಸರ್ವೆ ನಂಬರ್‌ನ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 2,65,895–00 ಗಳನ್ನು (ಎರಡು ಲಕ್ಷದ ಅರವತ್ತೈದು ಸಾವಿರದ ಎಂಟನೂರ ತೊಂಭತ್ತೈದು ರೂಪಾಯಿಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.2,65,895–00/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಪಿ.ಆರ್. 2846

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿನ ಅಂಗಾರಗಟ್ಟಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾಸಣಗಿ ಗ್ರಾಮದ ಜಮೀನುಗಳಿಗೆ ಬೆಳೆ ನಷ್ಟ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರ ದಿನಾಂಕ 06–08–11ರ ಪತ್ರ ಸಂಖ್ಯೆ : ಮುಇಂ/ಸನೀ/(ಉ)ವ/ಭೂಸ್ವಾಪ್ರ/2011–12/4216.

**ಪ್ರಸ್ತಾವನೆ :**

ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿನ ಅಂಗಾರಗಟ್ಟಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾಸಣಗಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಬೆಳೆನಷ್ಟ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 06–08–2011ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06–06–1996.
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20–07–1998.

ಭೂಸ್ವಾಧೀನ ಕಾಯ್ದೆ ಕಲಂ 18ರಡಿ ರಾಣಿಬೆನ್ನೂರು ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ : 2/01 ರಿಂದ 6/01 ಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 17–09–2008 ರಂದು ನೀಡಿದ ತೀರ್ಪಿನಲ್ಲಿ ಕಬ್ಜೆ ಪಡೆದ ದಿನಾಂಕದಿಂದ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ದಿನಾಂಕದವರೆಗೆ ಹಕ್ಕುದಾರರಿಗೆ ಉಂಟಾದ ನಷ್ಟದ ಬಗ್ಗೆ ವಿಚಾರಣೆ ಮಾಡಿ ನಷ್ಟ ಪರಿಹಾರವನ್ನು ನಿರ್ಧರಿಸಿ ಸದರಿ ನಷ್ಟ ಪರಿಹಾರವನ್ನು ಮಂಜೂರು ಮಾಡಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 729 ಎಲ್‌ಸಿಬಿ 2009, ದಿನಾಂಕ 27–02–2009 ರಂದು ಅಭಿಪ್ರಾಯ ಪಟ್ಟಿದೆ. ಉಪ ವಿಭಾಗಾಧಿಕಾರಿಯವರ ಲೆಕ್ಕಾಚಾರದಂತೆ ಪಾವತಿಸಬೇಕಾದ ಪರಿಹಾರದ ವಿವರ ಕೆಳಕಂಡಂತಿದೆ :

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಮಾಸಣಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 2/01 | 156/5 | 4–30 | 1853239 |
| 2 | 3/01 | 163/2, 163/4, 163/6, 163/9 | 3–36 | 1521606 |

| | | | | |
|---|---|---|---|---|
| 3 | 4/01 | 156/5P | 1–10 | 487694 |
| 4 | 5/01 | 156/5P | 2–00 | 780311 |
| 5 | 6/01 | 156/1 | 1–37 | 751049 |
| ಒಟ್ಟು | | | | **5393899** |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 17ನೇ ನವೆಂಬರ್ 2011**

ಹಾವೇರಿ ಜಿಲ್ಲೆ, ಬ್ಯಾಡಗಿ ತಾಲ್ಲೂಕಿನ ಅಂಗಾರಗಟ್ಟಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮಾಸಣಗಿ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ, ಉಪ ವಿಭಾಗಾಧಿಕಾರಿ, ಹಾವೇರಿ ಇವರ ಲೆಕ್ಕಚಾರದಂತೆ ಬೆಳೆನಷ್ಟ ಪರಿಹಾರ ಮೊತ್ತ ರೂ. 53,93,899–00 ಗಳನ್ನು (ಐವತ್ಮೂರು ಲಕ್ಷದ ತೊಂಭತ್ಮೂರು ಸಾವಿರದ ಎಂಟುನೂರ ತೊಂಭತ್ತೊಂಭತ್ತು ರೂಪಾಯಿಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.53,93,899–00/– ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಪಿ.ಆರ್. 2847 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಸವದತ್ತಿ ತಾಲ್ಲೂಕಿನ ದಾಸನಾಳ ಹಾಗೂ ಮಳ್ಳಿಕೇರಿ ಗ್ರಾಮದ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/4401, ದಿನಾಂಕ 20–08–2011.

**ಪ್ರಸ್ತಾವನೆ :**

ಬೆಳಗಾಂ ಜಿಲ್ಲೆ ಸವದತ್ತಿ ತಾಲ್ಲೂಕಿನ ದಾಸನಾಳ ಹಾಗೂ ಮಳ್ಳಿಕೇರಿ ಗ್ರಾಮದ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಳ್ಳೀಕೇರಿ ಮತ್ತು ದಾಸನಾಳ ಗ್ರಾಮಗಳ ಸ.ನಂ.ಗಳ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಕೋರಿ ಮೇಲೆ ಓದಲಾದ ದಿನಾಂಕ 20–08–2011ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ಹೊರಡಿಸಿದ ದಿನಾಂಕ 12–04–07
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ಘೋಷಿಸಿದ ದಿನಾಂಕ 18–11–09

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:94/10 ರಿಮದ 98/10ಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 29–10–10ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಪ್ರತಿ ಎಕರೆಗೆ ರೂ. 1,80,000/–ಗಳ ಹೆಚ್ಚುವರಿ ಪರಿಹಾರವನ್ನು ಇತರೆ ಸವಲತ್ತುಗಳೊಂದಿಗೆ ನೀಡುವಂತೆ ಆದೇಶಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 1261 ಎಲ್‌ಸಿಬಿ 2011, ದಿನಾಂಕ 18–10–11ರಲ್ಲಿ ಅಭಿಪ್ರಾಯ ನೀಡಿದೆ ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್.ಎಸಿ ಸಂಖ್ಯೆ | ದಾಸನಾಳ ಮತ್ತು ಮಳ್ಳಿಕೇರಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 94/10 | 207/1 | 5–28 | 2082398 |
| 2 | 95/10 | 139 | 1–03 | 406494 |
| 3 | 96/10 | 204 | 1–16 | 511843 |
| 4 | 97/10 | 206/1, 206/2, | 6–05 | 2237628 |
| 5 | 98/10 | 138/1,2,3 | 4–04 | 1548941 |
| | | | ಒಟ್ಟು | **6787304** |

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 116 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 23-11-2011.**

ಬೆಳಗಾಂ ಜಿಲ್ಲೆ, ಸವದತ್ತಿ ತಾಲ್ಲೂಕಿನ ದಾಸನಾಳ ಹಾಗೂ ಮಳ್ಳಿಕೇರಿ ಗ್ರಾಮದ ಬಸಿ ನೀರಿನ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಳ್ಳಿಕೇರಿ ಮತ್ತು ದಾಸನಾಳ ಗ್ರಾಮಗಳಿಗೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ಆದೇಶದಂತೆ ರೂ. 67,87,304-00 ಗಳನ್ನು (ಅರವತ್ತೇಳು ಲಕ್ಷದ ಎಂಭತ್ತೇಳು ಸಾವಿರದ ಮುನ್ನೂರ ನಾಲ್ಕು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 67,87,304/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ ಟಿಎಫ್‌ಪಿ 2010, ದಿನಾಂಕ 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2848 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಸೈದಾಪೂರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04-10-11ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ/2011-12/5175,

**ಪ್ರಸ್ತಾವನೆ :**

ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಸೈದಾಪೂರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೈದಾಪೂರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ಡಿ ಅಧಿಸೂಚನೆ ಹೊರಡಿಸಿದ ದಿನಾಂಕ 24-11-05
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 31-05-07.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಸವಕಲ್ಯಾಣ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 12-10-09ರಂದು ನೀಡಿದ ಸಾಮಾನ್ಯ ಆದೇಶದಲ್ಲಿ ಪ್ರತಿ ಎಕರೆಗೆ ರೂ. 2,20,000/-ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ: ಆರ್‌ಡಿ 1192 ಎಲ್‌ಸಿಜಿ 2009 ಮತ್ತು ಆರ್‌ಡಿ 873 ಎಲ್‌ಸಿಜಿ 2009, ದಿನಾಂಕ 09-08-2011ರಂದು ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿವೆ:

| ಕ್ರ.ಸಂ. | ಎಲ್.ಎಸಿ | ಸೈದಾಪೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 63/07 | 3/2 | 0-17 | 185744 |
| 2 | 64/07 | 3/2 | 0-32 | 349635 |
| 3 | 65/07 | 3/2 | 0-32 | 349635 |
| 4 | 69/07 | 8/2 | 3-18 | 1555119 |
| 5 | 71/07 | 9/ಎ | 3-26 | 1645271 |
| 6 | 72/07 | 10/2 | 1-00 | 450757 |
| 7 | 73/07 | 10/1 | 3-00 | 1352277 |
| 8 | 74/07 | 10/ಎ | 3-23 | 1611464 |
| | | | **ಒಟ್ಟು** | **7499902** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 154 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 02-12-2011.**

ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಸೈದಾಪೂರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೈದಾಪೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ. 74,99,902-00 ಗಳನ್ನು (ಎಪ್ಪತ್ನಾಲ್ಕು ಲಕ್ಷದ ತೊಂಭತ್ತೊಂಬತ್ತು ಸಾವಿರದ ಒಂಭೈನೂರ ಎರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

4. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
5. ಹೆಚ್ಚುವರಿ ಪರಿಹಾರ ಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
6. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 74,99,902/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20-10-10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2849 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 29-10-11ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011-12/5508.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೊಡ್ಲಿ-ಸುಂತಾಣ ಗ್ರಾಮದ ಜಮೀನುಗಳಿಗೆ ಚಿಂಚೋಳಿ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ 29-10-11ರ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತೆದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02-08-2007
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20-11-2008.

ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಚಿಂಚೋಳಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಪ್ರತಿ ಎಕರೆಗೆ ರೂ. 1,57,000/-ಗಳ ಬೆಲೆಯನ್ನು ನಿಗದಿಪಡಿಸಿ ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಈ ಕೆಳಕಂಡ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

| ಕ್ರ.ಸಂ. | ಎಲ್.ಎಸಿ | ಪತ್ರ ಸಂಖ್ಯೆ | ದಿನಾಂಕ |
|---|---|---|---|
| 1 | 81/09 | ಆರ್‌ಡಿ 808 ಎಲ್‌ಸಿಜಿ 2010 | 08/06/2011 |
| 2 | 82/09 | ಆರ್‌ಡಿ 809 ಎಲ್‌ಸಿಜಿ 2010 | 08/06/2011 |
| 3 | 93/09 | ಆರ್‌ಡಿ 828 ಎಲ್‌ಸಿಜಿ 2010 | 08/06/2011 |
| 4 | 94/09 | ಆರ್‌ಡಿ 801 ಎಲ್‌ಸಿಜಿ 2010 | 08/06/2011 |
| 5 | 99/09 | ಆರ್‌ಡಿ 806 ಎಲ್‌ಸಿಜಿ 2010 | 08/06/2011 |
| 6 | 100/09 | ಆರ್‌ಡಿ 807 ಎಲ್‌ಸಿಜಿ 2010 | 08/06/2011 |
| 7 | 101/09 | ಆರ್‌ಡಿ 820 ಎಲ್‌ಸಿಜಿ 2010 | 08/06/2011 |
| 8 | 102/09 | ಆರ್‌ಡಿ 818 ಎಲ್‌ಸಿಜಿ 2010 | 08/06/2011 |
| 9 | 104/09 | ಆರ್‌ಡಿ 821 ಎಲ್‌ಸಿಜಿ 2010 | 08/06/2011 |
| 10 | 106/09 | ಆರ್‌ಡಿ 823 ಎಲ್‌ಸಿಜಿ 2010 | 08/06/2011 |

| | | | |
|---|---|---|---|
| 11 | 107/09 | ಆರ್‌ಡಿ 822 ಎಲ್‌ಸಿಜಿ 2010 | 08/06/2011 |
| 12 | 108/09 | ಆರ್‌ಡಿ 815 ಎಲ್‌ಸಿಜಿ 2010 | 08/06/2011 |
| 13 | 110/09 | ಆರ್‌ಡಿ 816 ಎಲ್‌ಸಿಜಿ 2010 | 08/06/2011 |
| 14 | 111/09 | ಆರ್‌ಡಿ 819 ಎಲ್‌ಸಿಜಿ 2010 | 08/06/2011 |
| 15 | 112/09 | ಆರ್‌ಡಿ 817 ಎಲ್‌ಸಿಜಿ 2010 | 08/06/2011 |
| 16 | 113/09 | ಆರ್‌ಡಿ 814 ಎಲ್‌ಸಿಜಿ 2010 | 08/06/2011 |

ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಕೊಡ್ಲಿ–ಸುಂತಾಣ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 81/09 | 137/3 | 2–17 | 593797 |
| 2 | 82/09 | 132/2 | 0–10 | 61485 |
| 3 | 93/09 | 127/2 | 0–39 | 238923 |
| 4 | 94/09 | 118/2 | 0–18 | 110433 |
| 5 | 99/09 | 308/3 | 1–00 | 245041 |
| 6 | 100/09 | 13/2 | 1–00 | 245041 |
| 7 | 101/09 | 113/3 | 1–00 | 245041 |
| 8 | 102/09 | 18/ಎ | 0–36 | 220567 |
| 9 | 104/09 | 1/1/3 | 0–10 | 61485 |
| 10 | 106/09 | 19/3 | 0–31 | 189974 |
| 11 | 107/09 | 131/2–4 | 0–21 | 128789 |
| 12 | 108/09 | 2/3 | 0–09 | 55367 |
| 13 | 110/09 | 98/3 | 0–27 | 165500 |
| 14 | 111/09 | 122/1/9 | 0–21 | 128789 |
| 15 | 112/09 | 123/3 | 1–10 | 306228 |
| 16 | 113/09 | 94/2 | 0–12 | 73722 |
| | | | **ಒಟ್ಟು** | **3070182** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 153 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 02–12–2011.**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೋಡಿ ಕೊಡ್ಲಿ ಸುಂತಾಣ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರ ಮೊತ್ತ ರೂ. 30,70,182–00ಗಳನ್ನು (ಮೂವತ್ತು ಲಕ್ಷದ ಎಪ್ಪತ್ತು ಸಾವಿರದ ಒಂದುನೂರ ಎಂಭತ್ತೆರಡು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 30,70,182/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2850 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 29-10-11ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011-12/5509.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕೊಡ್ಲಿ-ಸುಂತಾಣ ಗ್ರಾಮದ ಜಮೀನುಗಳಿಗೆ ಚಿಂಚೋಳಿ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ 29-10-11ರ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 02-08-2007
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 20-11-2008.

ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಚಿಂಚೋಳಿ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಪ್ರತಿ ಎಕರೆಗೆ ರೂ. 1,57,000/-ಗಳ ಬೆಲೆಯನ್ನು ನಿಗದಿಪಡಿಸಿ ಈ ಮೊತ್ತದ ಮೇಲೆ ಶಾಸನಬದ್ಧ ಇತರೆ ಸವಲತ್ತುಗಳೊಂದಿಗೆ ಪಾವತಿಸಲು ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಈ ಕೆಳಕಂಡ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

| ಕ್ರ.ಸಂ. | ಎಲ್.ಎಸಿ | ಪತ್ರ ಸಂಖ್ಯೆ | ದಿನಾಂಕ |
|---|---|---|---|
| 1 | 84/09 | ಆರ್‌ಡಿ 810 ಎಲ್‌ಸಿಜಿ 2010 | 08/06/2011 |
| 2 | 85/09 | ಆರ್‌ಡಿ 811 ಎಲ್‌ಸಿಜಿ 2010 | 08/06/2011 |
| 3 | 86/09 | ಆರ್‌ಡಿ 799 ಎಲ್‌ಸಿಜಿ 2010 | 08/06/2011 |
| 4 | 87/09 | ಆರ್‌ಡಿ 800 ಎಲ್‌ಸಿಜಿ 2010 | 08/06/2011 |
| 5 | 88/09 | ಆರ್‌ಡಿ 802 ಎಲ್‌ಸಿಜಿ 2010 | 08/06/2011 |
| 6 | 89/09 | ಆರ್‌ಡಿ 826 ಎಲ್‌ಸಿಜಿ 2010 | 08/06/2011 |
| 7 | 90/09 | ಆರ್‌ಡಿ 825 ಎಲ್‌ಸಿಜಿ 2010 | 08/06/2011 |
| 8 | 91/09 | ಆರ್‌ಡಿ 827 ಎಲ್‌ಸಿಜಿ 2010 | 08/06/2011 |
| 9 | 95/09 | ಆರ್‌ಡಿ 803 ಎಲ್‌ಸಿಜಿ 2010 | 08/06/2011 |
| 10 | 96/09 | ಆರ್‌ಡಿ 804 ಎಲ್‌ಸಿಜಿ 2010 | 08/06/2011 |
| 11 | 97/09 | ಆರ್‌ಡಿ 805 ಎಲ್‌ಸಿಜಿ 2010 | 08/06/2011 |
| 12 | 103/09 | ಆರ್‌ಡಿ 824 ಎಲ್‌ಸಿಜಿ 2010 | 08/06/2011 |

ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಕೊಡ್ಲಿ-ಸುಂತಾಣ ಗ್ರಾಮದ ಸ.ನಂ. | ವಿಸ್ತೀರ್ಣ ಎ-ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 84/09 | 15/1/3 | 0-15 | 92812 |
| 2 | 85/09 | 12/3 | 0-15 | 92812 |
| 3 | 86/09 | 11/5/7 | 0-36 | 222329 |
| 4 | 87/09 | 84/1/8 | 0-23 | 142152 |
| 5 | 88/09 | 1/3 | 0-38 | 234664 |
| 6 | 89/09 | 90/1/5,90/2/6 | 0-31 | 191492 |
| 7 | 90/09 | 13/3 | 0-14 | 86645 |
| 8 | 91/09 | 119/3 | 0-24 | 148319 |
| 9 | 95/09 | 82/3 | 0-17 | 105147 |
| 10 | 96/09 | 92/3 | 0-34 | 209994 |
| 11 | 97/09 | 87/3 | 0-27 | 166822 |
| 12 | 103/09 | 84/3/9 | 0-18 | 111315 |
| | | | **ಒಟ್ಟು** | **1804503** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 152 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 02–12–2011.**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕೊಡ್ಲಿ ಅಲ್ಲಾಪುರ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೊಡ್ಲಿ ಸುಂತಾಣ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕ ಹಾಕಿದ ಪರಿಹಾರಧನ ಮೊತ್ತ ರೂ. 18,04,503–00ಗಳನ್ನು (ಹದಿನೆಂಟು ಲಕ್ಷದ ನಾಲ್ಕು ಸಾವಿರದ ಐನೂರ ಮೂರು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಲೆಕ್ಕಾಚಾರ ತಃಖ್ತೆಯನ್ನು ಮತ್ತೊಮ್ಮೆ ದೃಢೀಕರಿಸಿಕೊಂಡು ಪಾವತಿಸತಕ್ಕದ್ದು. ಎರಡನೇ ಬಾರಿ ಹೆಚ್ಚಿನ ಮೊತ್ತ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಮತ್ತೊಮ್ಮೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ಕೂಡಲೇ ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 18,04,503/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2851 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## WATER RESOURCES SECRETARIAT

**Sub :** Government of India scheme for providing central assistance to the State Governments for Flood Control and River Management schemes under Flood Management Programme. A State sector scheme (2007-12) regarding according administrative approval to the DPRs regarding.

**Read :** Letter No. 85/26/2011-CE(M-S) from CWC, monitoring south organization, Bangalore, Government of India, dated 05-12-2011.

**Preamble:**

Government of India has issued administrative approval vide order F No. 5/7/2006-Ganga (Vol-II)/4749-77, dated 28-11-2007. Ministry of Water Resources, Ganga Wing, Government of India. The scheme is "Flood management programme under State sector for under taking Flood control and river management works in the entire country during the XI plan.

The high lights of this scheme as per the Government of India approval and guidelines are as follows.

a) The scheme is approved in principle by Government of India however; detailed proposal(s) for each work would be prepared and submitted by the implementing agency.

b) The critical flood management and erosion control works including drainage development and Sea erosion works would be considered for central assistance under the scheme depending upon the critical situation.

c) The restoration of damaged flood management works would also be provided central assistance under the scheme if such works are not covered under Calamity relief fund or National calamity contingency fund.

d) Karnataka state is included under non-special category States. For this the central share is at 75% and State share is at 25%. For the restoration of damaged works central share is 90% and the State share is 10%.

Government Order No. Saneeyee 15 Saneevi 2007, dated 01-07-2010 is issued for implementation of this scheme from 2010-11, Out of the 8 detailed project reports submitted to Government of India, proposal in respect of the following work is considered for according administrative approval.

| Sl. No. | Name of the Scheme | Estimated cost Rs. in crores | Population to be benefitted | B. C. Ratio |
|---|---|---|---|---|
| 1 | Flood Protection works along the banks of Hemavathi river at Bankal town, Bankenhalli, Hyragudda, Bakkihalla, Mugrahalli, Kittalagandi and Subramanyapura villages in Chickamagalur dist. Karnataka State | 47.56 | 15000 | 1.75:1 |

It is considered to accord administrative approval to the above works under the head of account "4711-01-103-2-02-139 River management and flood control major works"

**Government Order No. SANEEYEE 02 Pranika 2011 (Tech), Bangalore, dated 09-12-2011**

Under the above circumstances, administrative approval is hereby accorded for taking up the above work with an estimated cost totaling to Rs. 47.56 crores (Rupees Forty seven crores and fifty six lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed within a period specified by Government of India
3. The funding of the scheme is in the ration of 75:25 between the Central Govt. and State Govt.
4. The central share is in the form of grant to the State
5. The projects will be implemented by the Water Resources Department (Minor Irrigation) as per the KTPP act.
6. The schemes shall be implemented as per the conditions and the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Technical sanction shall be accorded after getting necessary approval of the cabinet

By Order and in the name of the Governor of Karnataka

**Rudramurthy**

Ex-officio Under Secretary to Government

P.R. 2852 Water Resources Department (Minor Irrigation)

## ಕಂದಾಯ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಬರಗಾಲದ ಹಿನ್ನಲೆಯಲ್ಲಿ ಮೇವಿನ ಖರೀದಿ ದರ ಮತ್ತು ಸಾಗಾಣಿಕೆ ದರಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಕಂಇ 311 ಟಿಎನ್ಆರ್ 2002 ದಿನಾಂಕ: 20–06–2003.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 91 ಟಿಎಸ್‌ವೈ 2003, ದಿನಾಂಕ: 26–12–2003.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 362 ಟಿಎನ್‌ಆರ್ 2006, ದಿನಾಂಕ: 15–02–2007
4. ಆಯುಕ್ತರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ ಇವರ ಪತ್ರ ಸಂಖ್ಯೆ: ಆಪಸಂ/ಮೇವು/ವಿವ–17/ಪ್ರಕೃತಿ ವಿಕೋಪ/2011–12, ದಿನಾಂಕ: 22–11–2011.
5. ಜಿಲ್ಲಾಧಿಕಾರಿಗಳಿಂದ ಬಂದ ಬೇಡಿಕೆಯ ಪತ್ರಗಳು

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮೇವು ಸಾಗಾಣಿಕೆ ದರಗಳನ್ನು ನಿಗದಿಗೊಳಿಸಿದ್ದು, ಹಾಗೂ ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ, ಮೇವು ದರಗಳನ್ನು ನಿಗದಿಗೊಳಿಸಿದ್ದು, ಉಲ್ಲೇಖ (3)ರ ಸರ್ಕಾರಿ ಆದೇಶದಲ್ಲಿ ಉಲ್ಲೇಖ (1) ಮತ್ತು (2)ರಲ್ಲಿ ನಿಗದಿಗೊಳಿಸಿದ ದರಗಳನ್ನೇ ಮುಂದುವರೆಸಿದ್ದು, ಈಗ ಬಹಳ ಸಮಯದವರೆಗೆ ದರಗಳ ಪರಿಷ್ಕರಣೆ ಆಗಿರುವುದಿಲ್ಲ. ಅಲ್ಲದೇ, ಮೇವು ಉತ್ಪಾದನಾ ವೆಚ್ಚ, ಸಾಗಾಣಿಕೆ ವೆಚ್ಚ ಮತ್ತು ಇಂಧನ ವೆಚ್ಚಗಳಲ್ಲಿ ಬಹಳಷ್ಟು ಏರಿಕೆಯಾಗಿರುವುದರಿಂದ 2003–04ರ ಸರ್ಕಾರಿ ಆದೇಶಗಳಲ್ಲಿ ನಿಗದಿಪಡಿಸಿರುವ ದರಗಳನ್ನು ಪರಿಷ್ಕರಿಸುವಂತೆ ಮೇಲೆ ಓದಲಾದ (4) ಮತ್ತು (5)ರಲ್ಲಿ ಅನುಕ್ರಮವಾಗಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಮತ್ತು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 289 ಟಿಎನ್‌ಆರ್ 2011, ಬೆಂಗಳೂರು, ದಿನಾಂಕ: 05–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಪಡಿಸಿ, ಬರ ಪೀಡಿತ ಪ್ರದೇಶಗಳನ್ನು ಗೋಶಾಲೆ ತೆರೆಯುವ ಸಲುವಾಗಿ ಮತ್ತು ಮೇವು ಬ್ಯಾಂಕ್ ಉದ್ದೇಶಕ್ಕಾಗಿ ಈ ಕೆಳಕಂಡಂತೆ ಮೇವು ಖರೀದಿ ದರ ಮತ್ತು ಸಾಗಾಣಿಕೆ ದರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ, ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಮೇವಿನ ವಿಧ | ಪ್ರಸ್ತುತ ಚಾಲ್ತಿಯಲ್ಲಿರುವ ದರ ಪ್ರತಿ ಮೆಟ್ರಿಕ್ ಟನ್‌ಗೆ (ಸಾಗಾಣಿಕೆ ದರ ಹೊರತುಪಡಿಸಿ) ದರ ರೂ. | ಪರಿಷ್ಕೃತ ದರ ಪ್ರತಿ ಮೆಟ್ರಿಕ್ ಟನ್‌ಗೆ (ಸಾಗಾಣಿಕೆ ದರ ಹೊರತುಪಡಿಸಿ) ದರ–ರೂ. |
|---|---|---|---|
| 1 | ಒಣಗಿದ ಜೋಳದ ದಂಟು | 2,000/– | 3,000/– |
| 2 | ಒಣಗಿದ ಮುಸುಕಿನ ಜೋಳದ ಮೇವು | 1,500/– | 2,000/– |
| 3 | ಹಸಿರು ಮೇವು | 750/– | 1,500/– |
| 4 | ಬಾಡಿದ ಕಬ್ಬು (ಸೋಗೆ ಸಹಿತ) | 650/– | 2,000/– |
| 5 | ಭತ್ತದ ಒಣ ಹುಲ್ಲು | 1,500/– | 2,500/– |
| 6 | ರಾಗಿಯ ಒಣಹುಲ್ಲು | 750/– | 2,500/– |

**ಮೇವು ಸಾಗಾಣಿಕೆ ದರಗಳು**

| ಹಾಲಿ ಇರುವ ದರ ಪ್ರತಿ ಕ್ವಿಂಟಾಲ್‌ಗೆ/ಪ್ರತಿ ಕಿ.ಮೀ.ಗೆ–ರೂ.ಗಳು | ಪರಿಷ್ಕೃತ ದರ ಪ್ರತಿ ಕಿ.ಮೀ.ಗೆ– ರೂ.ಗಳು |
|---|---|
| 0.50 | 1.00 |

- ಮೇವು ಸಾಗಾಣಿಕೆ ವೆಚ್ಚವನ್ನು ಪ್ರತಿ ಕಿ.ಮೀಗೆ ಗರಿಷ್ಠ 1.00 ರೂ. ಅಂತೆ ಖಾಸಗಿ ವಾಹನಗಳನ್ನು ಬಾಡಿಗೆಗೆ ಪಡೆದಾಗ ಮಾತ್ರ ನೀಡುವುದು.
- ಮೇವು ಸಾಗಾಣಿಕೆಯನ್ನು ಗರಿಷ್ಠ 150 ಕಿ.ಮೀ.ಗಳ ವಿಸ್ತೀರ್ಣದಲ್ಲಿ ಅನುಮತಿಸುವುದು.
- ಸರ್ಕಾರಿ ವಾಹನಗಳು ಲಭ್ಯವಿಲ್ಲದಿದ್ದಲ್ಲಿ ಮಾತ್ರ ಖಾಸಗಿ ವಾಹನಗಳನ್ನು ಬಾಡಿಗೆಗೆ ಪಡೆಯತಕ್ಕದ್ದು.
- ಮೇವು ಸಾಗಾಣಿಕೆ ವೆಚ್ಚವನ್ನು ಬರ ಪೀಡಿತವೆಂದು ಘೋಷಿಸಲಾಗಿರುವ ತಾಲ್ಲೂಕುಗಳಲ್ಲಿ ಮೇವಿನ ಕೊರತೆಯಿದ್ದಲ್ಲಿ ಮಾತ್ರ ಬಳಸಲು ಅನ್ವಯಿಸುತ್ತದೆ.
- ಜಿಲ್ಲಾಧಿಕಾರಿಗಳು ಮೇವಿನ ಕೊರತೆ ಇರುವ ಮತ್ತು ಮೇವಿನ ಸಾಗಾಣಿಕೆ ಮಾಡಬೇಕಾದ ಅಗತ್ಯತೆಯ ಬಗ್ಗೆ ಪ್ರಮಾಣೀಕರಿಸತಕ್ಕದ್ದು.
- ಮೇವು ಸಾಗಾಣಿಕೆ ವೆಚ್ಚವು ಲೋಡಿಂಗ್ ಮತ್ತು ಅನ್‌ಲೋಡಿಂಗ್ ವೆಚ್ಚವನ್ನು ಒಳಗೊಂಡಿರುತ್ತವೆ.

ಮೇಲ್ಕಂಡ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಜಿಲ್ಲೆಗಳಿಗೆ ಎಸ್.ಡಿ.ಆರ್.ಎಫ್/ಎನ್.ಡಿ.ಆರ್.ಎಫ್ ನಿಧಿಯ ಅಡಿಯಲ್ಲಿ ಬಿಡುಗಡೆ ಮಾಡಿದ ಅನುದಾನದಿಂದ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿ.ನಿ. ಮತ್ತು ಸೇವೆಗಳು–2)

ಪಿ.ಆರ್. ನಂ. 2853

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣಾ ನಡೆಸಲು ಮಾನ್ಯ ಉಪ ಲೋಕಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ/(ಜಿ)/ಜಿ–44/ಸಿಆರ್ 10/2010 ಕೊಪ್ಪಳ, ದಿನಾಂಕ: 03-09–2010.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 58 ಎಡಿಇ 2010, ದಿನಾಂಕ: 23–09–2010.
3. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ/ಜಿ–44/ಸಿಆರ್ 10/2010 ಕೊಪ್ಪಳ, ದಿನಾಂಕ: 28–02–2011.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 58 ಎಡಿಇ 2010, ದಿನಾಂಕ: 03–06–2011.
5. ಮಾನ್ಯ ಉಪಲೋಕಾಯುಕ್ತರ ವರದಿ ಸಂಖ್ಯೆ: Compt/Uplok/GLB/232/2011/ARE-6, ದಿನಾಂಕ: 28–10–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ: 03–09–2010ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಶ್ರೀ ಶಾಮಣ್ಣ ಬಿನ್ ದುರಗಪ್ಪ ಮಾದರ್, ಕೃಷಿಕ, ಗುಡ್ಡದ ಹನುಮಸಾಗರ, ಕುಷ್ಟಗಿ ತಾಲ್ಲೂಕು, ಇವರು ತಮ್ಮ ಗ್ರಾಮದ ಸರ್ವೆ ನಂ. 3/1 ರಲ್ಲಿ 4 ಎಕರೆ 31 ಗುಂಟೆ ಮತ್ತು ತನ್ನ ಅಣ್ಣನ ಮಗ ದುರಗಪ್ಪ ಬಿನ್ ಹನುಮಂತಪ್ಪ ಇದೇ ಸರ್ವೆ ನಂಬರಿನ 4 ಎಕರೆ 31 ಗುಂಟೆ ಜಮೀನಿನ ಸಾಗುವಳಿ ಚೀಟಿ ಪಡೆದುಕೊಂಡಿದ್ದು, ಸದರಿ ಜಮೀನುಗಳ ಪೂರ್ಣ ಅಧಿಕಾರ ಹೊಂದುವ ಸಲುವಾಗಿ ಪಹಣಿಗಳನ್ನು ಪಡೆಯಲು ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿ, ವಿಚಾರಿಸಿದಾಗ, ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಇವರು ರೂ. 10,000/– ರೂಪಾಯಿಗಳನ್ನು ಲಂಚ ಕೊಡುವಂತೆ ಒತ್ತಾಯಿಸಿದ್ದರಿಂದ ಈ ಕುರಿತು ಸೂಕ್ತ ಕ್ರಮ ಕೈಗೊಳ್ಳವಂತೆ ಲೋಕಾಯುಕ್ತ ಪೋಲೀಸಿನವರಿಗೆ ದೂರು ನೀಡಿದ್ದರು. ಈ ಹಿನ್ನೆಲೆಯಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಕೊಪ್ಪಳ, ಇವರು ಮೇಲ್ಕಂಡ ಆರೋಪಿತ ಅಧಿಕಾರಿಯ ವಿರುದ್ಧ ಲಂಚ ನಿರೋದಕ ಖಾಯಿದೆ 1998 ರ ಕಲಂ 7, 13, (1) ಡಿ ಜೊತೆಗೆ 13 (2)ರ ಪ್ರಕಾರ ಕೊಪ್ಪಳ ಲೋಕಾಯುಕ್ತ ಠಾಣೆ ಮೊಕದ್ದಮೆ ನಂ. 10/2010 ರಲ್ಲಿ ಪ್ರಕರಣವನ್ನು ದಾಖಲಿಸಿ, ತನಿಖೆಯನ್ನು ಕೈಗೊಂಡು ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ: 19–08–2010 ರಂದು ಬೀಸಿದ ಬಲೆಗೆ ಆರೋಪಿತ ಅಧಿಕಾರಿಯಾದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಇವರು ತಮ್ಮ ಕಛೇರಿಯಲ್ಲಿ ಸಾಕ್ಷಿದಾರರುಗಳ ಸಮಕ್ಷಮ ದೂರುದಾರರಿಂದ ಲಂಚದ ಹಣ ರೂ. 10,000/–ವನ್ನು ಕೇಳಿ, ದೂರುದಾರರು ಕೊಡಲು ಹೋದಾಗ ಅಲ್ಲಿಯೇ ಇದ್ದ, ಖಾಸಗಿ ವ್ಯಕ್ತಿ ಶ್ರೀ ವೀರೇಶ್ ಬಿನ್ ಯಮನೂರಪ್ಪ ಮಂಗಳೂರು, ಇವರಿಗೆ ಕೊಡುವಂತೆ ತಿಳಿಸಿದ್ದು, ಅದರಂತೆ ಲಂಚದ ಹಣವನ್ನು ದೂರುದಾರರಿಂದ ಸದರಿ ಖಾಸಗಿ ವ್ಯಕ್ತಿಯ ಲಂಚದ ಹಣವನ್ನು ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಈ ರೀತಿ ನಡೆದ ಘಟನೆ ಬಗ್ಗೆ ದೂರುದಾರರು ಮತ್ತು ಸಾಕ್ಷಿದಾರರು ತಮ್ಮ ಹೇಳಿಕೆಯನ್ನು ದೃಢಪಡಿಸಿರುವುದರಿಂದ ಸದರಿ ಇಬ್ಬರು ಅರೋಪಿತರುಗಳನ್ನು ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರು ಪಡಿಸಲಾಗಿದೆ. ಎಂದು ತಿಳಿಸುತ್ತಾ, ಶ್ರೀ ಮಾರೆಪ್ಪ ತಹಶೀಲ್ದಾರ್, ಕುಷ್ಟಗಿ ಮತ್ತು ಶ್ರೀ ವೀರೇಶ್, ಖಾಸಗಿ ವ್ಯಕ್ತಿ ಇವರುಗಳ ಮೇಲಿನ ಭ್ರಷ್ಟಾಚಾರದ ಆಪಾದನೆಗಳಲ್ಲಿ ಮೇಲು ನೋಟಕ್ಕೆ ಸತ್ಯಾಂಶವಿರುತ್ತದೆ. ಆದ್ದರಿಂದ ಆರೋಪಿ ಸರ್ಕಾರಿ ಅಧಿಕಾರಿಯಾದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ, ಕೊಪ್ಪಳ ಜಿಲ್ಲೆ, ಇವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿದ್ದರಿಂದ ಇವರನ್ನು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲೆ ಓದಲಾದ ಕ್ರ.ಸಂ.(2) ದಿನಾಂಕ: 23–09–2010 ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 28–02–2011 ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಸದರಿ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿರುವ ತನಿಖಾಧಿಕಾರಿಯ ಅಂತಿಮ ವರದಿಯೊಂದಿಗೆ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಮಾರೆಪ್ಪ, ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1998 ರ ಕಲಂ 7,13(1)ರ ಜೊತೆಗೆ 13(2) ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ

19(1)(ಬಿ) ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಸದರಿ ಆರೋಪಿತ ಅಧಿಕಾರಿಗಳ ಅಭಿಯೋಜನೆಗೆ ಒಳಪಡಿಸಲು ಅರ್ಹರಿರುವುದರಿಂದ ಮಂಜೂರಾತಿಯನ್ನು ನೀಡುವ ಸಕ್ಷಮ ಪ್ರಾಧಿಕಾರ ಅರ್ಥಾತ್ ಸದರಿ ಆಪಾದಿತ ಸರ್ಕಾರಿ ಅಧಿಕಾರಿಯನ್ನು ಹುದ್ದೆಯಿಂದ ತೆಗೆದುಹಾಕುವ ಅಧಿಕಾರವುಳ್ಳ ಪ್ರಾಧಿಕಾರದ ಪೂರ್ವಾನುಮತಿ ಅತ್ಯಗತ್ಯವಾಗಿರುವುದರಿಂದ ಅಭಿಯೋಜನಾ ಮಂಜೂರಾತಿ ನೀಡುವಂತೆ ಕೋರಿದ್ದರು.

ಈ ಬಗ್ಗೆ ಅನುಮತಿ ನೀಡುವ ಸಂಬಂಧ ಅಪರ ಪೊಲೀಸ್ ನಿರ್ದೇಶಕರು ಒದಗಿಸಿರುವ ದಾಖಲೆಗಳನ್ನು ಪರಿಶೀಲಿಸಲಾಗಿ ಅಂದರೆ, ಫಿರ್ಯಾದುದಾರರ ದೂರು, ಪ್ರಥಮ ವರ್ತಮಾನ ವರದಿ, ಟ್ರ್ಯಾಪ್ ಪ್ರಕ್ರಿಯೆಯನ್ನು ಅನುಸರಿಸಿದ ಪಂಚನಾಮೆ, ಮಹಜರ್, ಧ್ವನಿ ಮುದ್ರಣ, ನೆರಳಿನಂತೆ ಹಿಂಬಾಲಿಸಿದ ಸಾಕ್ಷಿದಾರರ ಸಾಕ್ಷ್ಯ, ತನಿಖಾಧಿಕಾರಿಯ ವರದಿ ಮತ್ತು ರಸಾಯನಿಕ ಪರೀಕ್ಷೆಗಳ ವರದಿ ಮುಂತಾದ ದಾಖಲೆಗಳನ್ನು ಗಣನೆಗೆ ತೆಗೆದುಕೊಂಡಾಗ ಶ್ರೀ ಮಾರೆಪ್ಪ ನಿವೃತ್ತ ತಹಶೀಲ್ದಾರರ ವಿರುದ್ಧದ ಆರೋಪಗಳ ಬಗ್ಗೆ 1988ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯಡಿ ಅವರನ್ನು ಅಭಿಯೋಜನೆಗೆ ಒಳಪಡಿಸಲು ಮೇಲ್ನೋಟಕ್ಕೆ ಸ್ಪಷ್ಟವಾದ ಒಂದು ಪ್ರಕರಣವಿರುವುದು ಸರ್ಕಾರಕ್ಕೆ ಮನವರಿಕೆಯಾಗಿದೆ. ಆದುದರಿಂದ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ಪೊಲೀಸ್ ಮಹಾ ನಿರ್ದೇಶಕರ ವರದಿಯನ್ನು ಸರ್ಕಾರವು ಪರಿಗಣಿಸಿ, ಸದರಿ ನಿವೃತ್ತ ತಹಶೀಲ್ದಾರ್‌ರವರ ಕ್ರಿಮಿನಲ್ ದುರ್ನಡತೆಗಾಗಿ ಅವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನಾಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ದಿನಾಂಕ: 03-06-2011 ರ ಆದೇಶದಲ್ಲಿ ಭ್ರಷ್ಟಾಚಾರ ನಿವಾರಣಾ ಅಧಿನಿಯಮ ಕಲಂ 7, 13(1)(ಡಿ) ಇದರ ಜೊತೆಗೆ ಓದಲಾದ ಕಲಂ 13(2) ರಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಅಪರ ಪೊಲೀಸ್ ಶಿಫಾರಸ್ಸು ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರಿಗೆ ಮಂಜೂರಾತಿ ನೀಡಲಾಗಿತ್ತು.

ಮಾನ್ಯ ಉಪ ಲೋಕಾಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ: 28-10-2011 ರ ತಮ್ಮ ವರದಿಯಲ್ಲಿ ಶ್ರೀ ಮಾರೆಪ್ಪ ಹಿಂದಿನ ತಹಶೀಲ್ದಾರ್, ಕುಷ್ಟಗಿ, ಕೊಪ್ಪಳ ಜಿಲ್ಲೆ ಇವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1956 ರ ನಿಯಮ 3(1) ರನ್ವಯ ಕರ್ತವ್ಯ ಲೋಪವೆಸಗಿರುತ್ತಾರೆಂದು ತಿಳಿಸುತ್ತಾ, ಕರ್ನಾಟಕ ಲೋಕಾಯುಕ್ತ ಕಾಯ್ದೆಯ ನಿಯಮ 12(3) ರನ್ವಯ ಶ್ರೀಯುತರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವಂತೆ ಮತ್ತು ಶ್ರೀಯುತರು ಈಗಾಗಲೇ ನಿವೃತ್ತರಾಗಿರುವುದರಿಂದ ಕೆ.ಸಿ.ಎಸ್.ಆರ್. 1958 ರ ನಿಯಮ 114(2)(ಬಿ)(i) ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14(ಎ) ರಡಿಯಲ್ಲಿ ವಿಚಾರಣೆ ನಡೆಸಲು ತಮಗೆ ವಹಿಸಿಕೊಡುವಂತೆ, ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಮಾನ್ಯ ಉಪ ಲೋಕಾಯುಕ್ತರ ದಿನಾಂಕ: 28-10-2011 ರ ವರದಿಯನ್ನು ಹಾಗೂ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿ, ಶ್ರೀ ಮಾರೆಪ್ಪ, ಹಿಂದಿನ ತಹಶೀಲ್ದಾರ್, ಕುಷ್ಟಗಿ, ಕೊಪ್ಪಳ ಜಿಲ್ಲೆ ಇವರ ವಿರುದ್ಧ ಕೆ.ಸಿ.ಎಸ್.ಆರ್. 1958ರ ನಿಯಮ 114(2)(ಬಿ)(i) ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14(ಎ) ರಡಿಯಲ್ಲಿ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಎಡಿಇ 2010, ಬೆಂಗಳೂರು, ದಿನಾಂಕ: 07-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಮಾರೆಪ್ಪ, ಹಿಂದಿನ ತಹಶೀಲ್ದಾರ್, ಕುಷ್ಟಗಿ, ಕೊಪ್ಪಳ ಜಿಲ್ಲೆ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 114(2)(ಬಿ)(i) ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 14(ಎ) ರಡಿಯಲ್ಲಿ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 2854

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 5-00 ಎಕರೆ, ಜಮೀನನ್ನು ಕಲ್ಲುಪುಡಿ ತೆಗೆಯಲು ಮತ್ತು ಯಂತ್ರಗಳನ್ನು ಸ್ಥಾಪಿಸಲು ಮೆ. ಜಿ.ವಿ.ಆರ್. ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ತಮ್ಮ ಪತ್ರ ಸಂಖ್ಯೆ: ಗಣಿ/78/2011-12 ದಿನಾಂಕ: 16-08-2011 ಹಾಗೂ ದಿನಾಂಕ: 29-10-2011.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಓದಲಾದ ದಿನಾಂಕ: 16-08-2011 ಮತ್ತು 29-10-2011ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 5-00 ಎಕರೆ ಜಮೀನನ್ನು ಕಲ್ಲುಪುಡಿ ತೆಗೆಯಲು ಮತ್ತು ಯಂತ್ರಗಳನ್ನು ಸ್ಥಾಪಿಸಲು ಮೆ. ಜಿ.ವಿ.ಆರ್. ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

2) ಕಲ್ಲುಪುಡಿ ತೆಗೆಯಲು ಮತ್ತು ಯಂತ್ರಗಳನ್ನು ಸ್ಥಾಪಿಸುವ ಸಲುವಾಗಿ ಮೆ. ಜಿವಿಆರ್. ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು ಇವರಿಗೆ ಬಳ್ಳಾರಿ ಜಿಲ್ಲೆ ಸಂಡೂರು-ಕೂಡ್ಲಿಗಿ ರಸ್ತೆ, ಸಂಡೂರು-ಹೊಸಪೇಟೆ ರಸ್ತೆ ಹಾಗೂ ಸಂಡೂರು-ತೋರಣಗಲ್ಲು ರಸ್ತೆ ಕಾಮಗಾರಿ ಕೆಲಸ ಮಾಡಲು ಕೆ.ಆರ್.ಡಿ.ಸಿ.ಎಲ್ ಬೆಂಗಳೂರು ಇವರಿಂದ ಮಂಜೂರಾಗಿದ್ದು, ಸದರಿ ಕಾಮಗಾರಿ ಕೆಲಸಕ್ಕೆ 9 ಲಕ್ಷ ಎಂ.ಟಿ. ಮೆಟಲ್ ಅವಶ್ಯಕವಾಗಿರುತ್ತದೆ. ಅರ್ಜಿದಾರರು ಕೋರಿರುವ ಜಮೀನು ಸರ್ಕಾರಿ ಜಮೀನಾಗಿದ್ದು, ಸದರಿ ಜಮೀನಿನಲ್ಲಿ ಯಾವುದೇ ಅತಿಕ್ರಮಣ ಇರುವುದಿಲ್ಲ. ಗ್ರಾಮದಿಂದ 4 ಕಿ.ಮೀ.

ದೂರವಿದ್ದು ರಸ್ತೆ ಸಂಪರ್ಕ ಹೊಂದಿದೆ, ಹಾಗೂ ಅರಣ್ಯ ಪ್ರದೇಶಕ್ಕೆ ಸೇರಿಲ್ಲವೆಂದು ವ್ಯವಸಾಯಕ್ಕೆ ಯೋಗ್ಯ ಇರುವುದಿಲ್ಲವೆಂದು ಹಾಗೂ ಸ್ಥಳವು ಸೂಕ್ತವಿರುತ್ತದೆಂದು ವರದಿಸಿರುತ್ತಾರೆ.

3) ಪ್ರಸ್ತಾಪಿತ ಹೆಚ್.ಕೆ. ಹಳ್ಳಿ ಸ.ನಂ. 711 ಪೈಕಿ 5–00 ಎಕರೆ ಜಮೀನು ಸರ್ಕಾರಿ ಕಂದಾಯ ಜಮೀನಾಗಿರುತ್ತದೆ. ಕೆ.ಆರ್.ಡಿ.ಸಿ.ಎಲ್ ಇವರು ತೋರಣಗಲ್ಲಿನಿಂದ ಕೂಡ್ಲಿಗಿವರೆಗೆ ಮತ್ತು ಸಂಡೂರಿನಿಂದ ಹೊಸಪೇಟೆ ವರೆಗಿನ ರಸ್ತೆಗಳು ಸಂಪೂರ್ಣವಾಗಿ ಹಾಳಾಗಿರುವುದರಿಂದ ಅವುಗಳನ್ನು ಉನ್ನತ ದರ್ಜೆ ರಸ್ತೆಗಳನ್ನಾಗಿ ಮಾಡಲು ಟೆಂಡರ್ ಕರೆದಿದ್ದು. ಮೆ. ಜಿವಿಆರ್.ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಬೆಂಗಳೂರು ಇವರಿಗೆ ಕಾಮಗಾರಿ ನಿರ್ವಹಣೆಯನ್ನು ವಹಿಸಲಾಗಿದ್ದು. ಸದರಿಯವರು ಅಗತ್ಯವಿರುವ ಜೆಲ್ಲಿ ಮೆಟಲ್‌ಗಾಗಿ ಈಗಾಗಲೇ ಉಪನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಹೊಸಪೇಟೆ ಇವರಿಂದ ಶಿಫಾರಸ್ಸು ಪಡೆದಿರುತ್ತಾರೆ. ಸರ್ಕಾರದ ದಿನಾಂಕ: 07–09–2011 ರ ಹೊಸ ನೀತಿಯಂತೆ ನೇಮಕ ಮಾಡಿರುವ ಜಿಲ್ಲಾ ಮಟ್ಟದ ಸಮಿತಿಯು ಇದಕ್ಕೆ ಅನುಮೋದನೆ ನೀಡಬೇಕಾಗಿದ್ದು. ಈಗ ಪ್ರಸ್ತಾಪಿಸಿದ ಜಮೀನಿಗೆ ಮಂಜೂರಾದ ನಂತರವಷ್ಟೆ ಪರವಾನಿಗೆ ನೀಡಬೇಕಾಗಿರುತ್ತದೆ. ಸದರಿ ಕಂಪೆನಿಯು ರಸ್ತೆ ಕಾಮಗಾರಿ ಗುತ್ತಿಗೆ ಪಡೆದಿರುವ ಬಗ್ಗೆ ಡಿವಿಜನಲ್ ಇಂಜಿನಿಯರ್ ಕೆ.ಆರ್.ಡಿ.ಸಿ.ಎಲ್ ಇವರು ದಿನಾಂಕ: 22–07–2011ರಲ್ಲಿ Work Order ನೀಡಿರುತ್ತಾರೆ. ರಸ್ತೆ ಕಾಮಗಾರಿ ನಿರ್ವಹಿಸಲು ಅಗತ್ಯವಾಗಿ ಬೇಕಾದ ಕಲ್ಲಿನ ಪ್ರಮಾಣ ಮತ್ತು ಕಲ್ಲುಗಣಿ ಪ್ರದೇಶದ ಬಗ್ಗೆ ಮಾಡಿರುವ ಅಂದಾಜು ಪಟ್ಟಿಯಂತೆ ಒಟ್ಟು 900788 ಮೆಟ್ರಿಕ್ ಟನ್ ಅಗತ್ಯವಿರುತ್ತದೆಂದು ಅಂದಾಜು ಪಟ್ಟಿಯೊಂದಿಗೆ ಸಲ್ಲಿಸಿರುತ್ತಾರೆ. ಪ್ರಸ್ತಾಪಿತ 5–00 ಎಕರೆ ಜಮೀನನ್ನು ಗುತ್ತಿಗೆ ನೀಡುವುದು ಅವಶ್ಯಕವಾಗಿರುವುದರಿಂದ ಸರ್ಕಾರದ ಪೂರ್ವಾನುಮೋದನೆ ನೀಡಲು ಕೋರಿರುತ್ತಾರೆ.

4) ಜಿಲ್ಲಾಧಿಕಾರಿಗಳು ಬಳ್ಳಾರಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 54 ಎಲ್‌ಜಿಇ 2011 ಬೆಂಗಳೂರು, ದಿನಾಂಕ: 08–12–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಹೆಚ್.ಕೆ. ಹಳ್ಳಿ ಸ.ನಂ. 711ರ ಪೈಕಿ 5–00 ಎಕರೆ ಜಮೀನನ್ನು ಜೆಲ್ಲಿ ಮೆಟಲ್ ತೆಗೆದು ರಸ್ತೆ ದುರಸ್ತಿಗಾಗಿ ಉಪಯೋಗಿಸಿಕೊಳ್ಳಲು ಮತ್ತು ಯಂತ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಮೆ. ಜಿವಿಆರ್‌ಇನ್‌ಫ್ರಾ ಪ್ರಾಜೆಕ್ಟ್ ಲಿಮಿಟೆಡ್ ಕಂಪನಿ ಬೆಂಗಳೂರು ಇವರಿಗೆ ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 19ರನ್ವಯ 2 ವರ್ಷಗಳ ಅವಧಿಗೆ ಮಾರುಕಟ್ಟೆ ದರದ ಶೇಕಡ 10ರಷ್ಟು ಗುತ್ತಿಗೆ ವಿಧಿಸಿ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಮಂಜೂರು ಮಾಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

1) ಕಲ್ಲುಗಣಿ ಕೈಗೊಳ್ಳಲು ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ಪರವಾನಿಗೆ ಪಡೆದು ರಸ್ತೆಗಾಗಿ ಬೇಕಾಗುವ ಕಲ್ಲು ಮಾತ್ರ ತೆಗೆಯಬೇಕು.
2) ಪರಿಸರ ರಕ್ಷಣೆ ಬಗ್ಗೆ ನಿಗದಿಪಡಿಸಿದ ಮಾರ್ಗಸೂಚಿ ಹಾಗೂ ನಿಯಮಗಳನ್ನು ಪಾಲಿಸಬೇಕು.
3) ಟೆಂಡರ್ ಅವಧಿಯ ವರೆಗೆ ಮಾತ್ರ ಗುತ್ತಿಗೆ ನೀಡಿ ನಂತರ ರದ್ದುಪಡಿಸಬೇಕು.
4) ಕೆ.ಆರ್.ಡಿ.ಸಿ.ಎಲ್ ಸಂಸ್ಥೆಯು ಗುತ್ತಿಗೆ ಪಡೆದ ಕಂಪನಿ ಕಲ್ಲನ್ನು ರಸ್ತೆಗಾಗಿ ಮಾತ್ರ ಉಪಯೋಗಿಸುತ್ತಿದೆ ಎಂದು ಖಾತರಿಪಡಿಸಿಕೊಳ್ಳಬೇಕು.
5) ಅರಣ್ಯ ಮತ್ತು ಪರಿಸರ ಇಲಾಖೆಯಿಂದ ಅನುಮತಿ ಪಡೆಯಬೇಕು.
6) ಮೇಲೆ ತಿಳಿಸಿದ ಷರತ್ತು ಉಲ್ಲಂಘಿಸಿದರೆ ಜಮೀನು ಗುತ್ತಿಗೆ ನೀಡಿದ ಗುತ್ತಿಗೆ ಕರಾರು ರದ್ದು ಪಡಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:857/ವೆಚ್ಚ–7/2011 ದಿನಾಂಕ: 23–11–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ.ಮಂ–3)

ಪಿ.ಆರ್. ನಂ. 2855

## ಕಂದಾಯ ಸಚಿವಾಲಯ

**ವಿಷಯ :** 2006ನೇ ತಂಡದ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ.: ಕಂಇ 51 ಎಎಸ್‌ಡಿ 2008, ದಿನಾಂಕ: 23–05–2008.
2. ಸರ್ಕಾರದ ಅಧಿಕೃತ ಜ್ಞಾಪನ ಸಂ.: ಆರ್‌ಡಿ 223 ಎಎಸ್‌ಡಿ 2008, ದಿನಾಂಕ: 11–06–2008.
3. ಸರ್ಕಾರದ ಆದೇಶ ಸಂ.: ಕಂಇ 462 ಎಎಸ್‌ಡಿ 2010, ದಿನಾಂಕ: 21–10=2011, 27–01–2011, 02–04–2011 ಮತ್ತು 22–06–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.: (1) ದಿನಾಂಕ: 23–05–2008 ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳಿಗೆ ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 11–06–2008ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಆದರೆ. ಇವರುಗಳಲ್ಲಿ ವಿವಿಧ ಕಾರಣಗಳಿಂದ/ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 5 ಪರಿವೀಕ್ಷಣಾ

ತಹಶೀಲ್ದಾರರುಗಳು (ಶ್ರೀ ಶಂಭುಲಿಂಗಪ್ಪ, ಶ್ರೀ ಅಭ್ಯುದಯ ಎ. ಆನಂದ್, ಶ್ರೀ ಎಂ.ಜೆ. ಚೇತನ, ಶ್ರೀ ಪ್ರಸನ್ನಕುಮಾರ್ ಬಿ.ಕೆ. ಮತ್ತು ಶ್ರೀ ಇಸ್ಲಾವುದ್ದೀನ್) ಸೇವೆಯಿಂದ ಬಿಟ್ಟುಹೋಗಿರುತ್ತಾರೆ.

ಮೇಲೆ ಓದಲಾದ ಕ್ರಸಂ. (3)ರ ಆದೇಶಗಳಲ್ಲಿ ಇನ್ನುಳಿದ 35 ಜನ ಪ್ರೊಬೇಷನರಿ ತಹಶೀಲ್ದಾರರುಗಳ ಪೈಕಿ 31 ಜನ ಪ್ರೊಬೇಷನರಿ ತಹಶೀಲ್ದಾರರು ಇಲಾಖಾ ಪರೀಕ್ಷೆ ಪಾಸಾಗಿದ್ದು ಮತ್ತು ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರಲಿಲ್ಲವಾದ್ದರಿಂದ ಹಾಗೂ ಅವರುಗಳ ಕಾರ್ಯನಿರ್ವಹಣಾ ವರದಿಗಳು ಸಮರ್ಪಕವಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1977ರ ನಿಯಮ 5(1)ರನ್ವಯ ಪ್ರೊಬೇಷನ್ ಅವಧಿಯನ್ನು ತೃಪ್ತಿಕರ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿರುತ್ತದೆ.

ಉಳಿದ ಪ್ರೊಬೇಷನರಿ ತಹಶೀಲ್ದಾರರುಗಳ ಪ್ರೊಬೇಷನರಿ ಅವಧಿಯನ್ನು ಘೋಷಿಸುವ ಕುರಿತು ಜಿಲ್ಲಾಧಿಕಾರಿಗಳಿಂದ ಬಂದ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ. ಈ ಮಾಹಿತಿ ಪ್ರಕಾರ ಪ್ರೊಬೇಷನ್ ಅವಧಿಯಲ್ಲಿನ ತೃಪ್ತಿಕರ ಕಾರ್ಯನಿರ್ವಹಣಾ ವರದಿಗಳು, ನಿಗದಿ ಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಪಾಸಾಗಿರುವ ಬಗ್ಗೆ ದೃಢೀಕೃತ ಸರ್ಟಿಫಿಕೇಟ್, ತರಬೇತಿಯು ತೃಪ್ತಿಕರವಾಗಿರುವ ಬಗ್ಗೆ ಮೇಲಾಧಿಕಾರಿಗಳು ಶಿಫಾರಸ್ಸು ಮಾಡಿರುವ ವಿವರ ಮತ್ತು ಪ್ರೊಬೇಷನ್ ಅವಧಿಯಲ್ಲಿ ಯಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲದೇ ಇರುವ ಈ ಕೆಳಕಂಡ 3 ಜನ ಪ್ರೊಬೇಷನರ್ ತಹಶೀಲ್ದಾರರುಗಳು ಪ್ರೊಬೇಷನರಿ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1977ರ ನಿಯಮ 5(1)ರನ್ವಯ ಪ್ರೊಬೇಷನ್ ಅವಧಿಯನ್ನು ತೃಪ್ತಿಕರ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 462 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 22-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ 3 ಪ್ರೊಬೇಷನರಿ ತಹಶೀಲ್ದಾರರುಗಳು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪರಿವೀಕ್ಷಣಾ ತಹಶೀಲ್ದಾರರ ಹೆಸರು (ಶ್ರೀ/ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಭಾಸ್ಕರ್. ಎನ್. | 23-05-2008 | 22-05-2010 |
| 2 | ವೀರೇಶ್ ಬಿರಾದಾರ್ | 23-05-2008 | 22-05-2010 |
| 3 | ಬಾಳಪ್ಪ ಹಂದಿಗುಂದ | 23-05-2008 | 08-04-2011 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಪಿ.ಆರ್. ನಂ. 2856

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

## ಕಂದಾಯ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ ಚಿಕ್ಕೋಡಿ ತಾಲ್ಲೂಕು, ಸದಲಗಾ ಪಟ್ಟಣದ ಉಪ ನೋಂದಣಿ ಕಛೇರಿ ಸಿಬ್ಬಂದಿ ನಿಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಮುನೋಸ 2001, ದಿನಾಂಕ: 11-06-2001.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 87 ಮುನೋಸ 2006, ದಿನಾಂಕ: 11-08-2006.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 52 ಮುನೋಸ 2007, ದಿನಾಂಕ: 16-10-2007.
4. ಸರ್ಕಾರದ ಆದೇಶ ಸಂಖ್ಯೆ: ಕಂಇ 46 ಮುನೋಸ 2008, ದಿನಾಂಕ: 20-04-2009.
5. ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಮುನೋಸ 2009, ದಿನಾಂಕ: 17-09-2010.
6. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಅಯುಕ್ತರವರ ಪತ್ರ ಸಂಖ್ಯೆ: ಇಎಸ್‌ಟಿ 1-103/01-02 ದಿನಾಂಕ: 23-07-2011.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 11-06-2011ರ ಸರ್ಕಾರದ ಆದೇಶದಲ್ಲಿ ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ, ಸದಲಗಾ ಪಟ್ಟಣದಲ್ಲಿ ಹೊಸದಾಗಿ ಉಪ ನೋಂದಣಿ ಕಛೇರಿ ಪ್ರಾರಂಭಿಸಲು ಅನುಮತಿ ನೀಡಲಾಗಿದೆ. ಉಪ ನೋಂದಣಿ ಕಛೇರಿ ಕರ್ತವ್ಯಗಳ ನಿರ್ವಹಣೆಗೆ ಸಿಬ್ಬಂದಿಯನ್ನು ನಿಯೋಜನೆ ಮೇಲೆ ಭರ್ತಿ ಮಾಡಲು ಅನುಮತಿ ನೀಡಲಾಗಿತ್ತು. ತದನಂತರ ತಾತ್ಕಾಲಿಕವಾಗಿ ಹುದ್ದೆಗಳನ್ನು ಸೃಜಿಸಿ ಆದೇಶಿಸಿದೆ. ಉಪ ನೋಂದಣಿ ಕಛೇರಿಯಿಂದ ಹೆಚ್ಚಿನ ರಾಜಸ್ವ ಸಂಗ್ರಹವಾಗುತ್ತಿರುವುದರಿಂದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕೋರಿಕೆಯನ್ವಯ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸಿಬ್ಬಂದಿಯನ್ನು ಮೇಲೆ ಓದಲಾದ (2) ರಿಂದ (5)ರ ವರೆಗಿನ ಸರ್ಕಾರದ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದೆ.

ಮೇಲೆ ಓದಲಾದ (6) ದಿನಾಂಕ: 23-07-2011ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಸದರಿ ಕಛೇರಿಯಿಂದ ಹೆಚ್ಚಿನ ರಾಜಸ್ವವು ಸಂಗ್ರಹಣೆಯಾಗುತ್ತಿರುವುದರಿಂದ ಹಾಗೂ ಸಾರ್ವಜನಿಕರಿಗೆ ಅನುಕೂಲವಾಗುವ ದೃಷ್ಟಿಯಿಂದ ಸದರಿ ಕಛೇರಿಗೆ ಮಂಜೂರಾದ ಹಂಗಾಮಿ ಹುದ್ದೆಗಳನ್ನು ದಿನಾಂಕ: 01-04-2011 ರಿಂದ ಜಾರಿಗೆ ಬರುವಂತೆ ಮುಂದುವರೆಸುವಂತೆ ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ, ಸದಲಗಾ ಪಟ್ಟಣದಲ್ಲಿರುವ ಉಪ ನೋಂದಣಿ ಕಛೇರಿ ಸಿಬ್ಬಂದಿಯನ್ನು ದಿನಾಂಕ: 01-04-2011 ರಿಂದ 31-03-2013ರವರೆಗೆ 2 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 39 ಮುನೋಸೇ 2011, ಬೆಂಗಳೂರು, ದಿನಾಂಕ: 21-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 11-06-2001ರ ಸರ್ಕಾರದ ಆದೇಶ ಸಂಖ್ಯೆ: ಕಂಇ 69 ಮುನೋಸ 2001 ರಲ್ಲಿ ಸೃಜಿಸಲಾದ ಈ ಕೆಳಗೆ ನಮೂದಿಸಿರುವ ಹುದ್ದೆಗಳನ್ನು ದಿನಾಂಕ: 01-04-2011 ರಿಂದ 31-03-2013 ರವರೆಗೆ 2 ವರ್ಷಗಳ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಪದನಾಮ | ಮಂಜೂರಾದ ಹುದ್ದೆ |
|---|---|---|
| 1. | ಉಪ ನೋಂದಣಾಧಿಕಾರಿ | 1 |
| 2. | ಪ್ರಥಮ ದರ್ಜೆ ಸಹಾಯಕ | 1 |
| 3. | ದ್ವಿತೀಯ ದರ್ಜೆ ಸಹಾಯಕ | 2 |
| 4. | ಜವಾನ | 1 |
| 5. | ಕಾವಲುಗಾರ | 1 |

ಈ ಮೇಲ್ಕಂಡ ಸಿಬ್ಬಂದಿಗೆ ವೇತನ ಭತ್ಯೆಗಳನ್ನು 2011-12ನೇ ಸಾಲಿನ ಲೆಕ್ಕ ಶೀರ್ಷಿಕೆ 2030-03-001-1-00 ರಡಿ ಭರಿಸತಕ್ಕದ್ದು. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: 1 ಟಿಎಫ್‌ಪಿ 96 ದಿನಾಂಕ: 11-07-1996 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಪಿ.ಆರ್. ನಂ. 2857

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ಶ್ರೀನಿವಾಸಯ್ಯ, ಹಿಂದಿನ ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ, ಪ್ರಸ್ತುತ ತಹಶೀಲ್ದಾರ್, ಬಿ.ಎಮ್.ಆರ್.ಸಿ.ಎಲ್ ಇವರಿಗೆ ತಹಶೀಲ್ದಾರ್ ಗ್ರೇಡ್-1 ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಆರ್. ಶ್ರೀನಿವಾಸಯ್ಯ, ತಹಶೀಲ್ದಾರ್, ಇವರ ಮನವಿ ದಿನಾಂಕ : 08-10-2010
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 06 ಎಡಿಇ 2006, ದಿನಾಂಕ: 09-01-2009.
3. ಪ್ರಾದೇಶಿಕ ಆಯುಕ್ತರು ಇವರ ಪ್ರಕರಣದ ಸಂಖ್ಯೆ : ಸಿಸಿಎ ವಿವ/78/08-09, ದಿನಾಂಕ : 23-09-2010.
4. ಸರ್ಕಾರದ ಪತ್ರ ದಿನಾಂಕ : 19-07-2011 ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಿರುವ ಬಗ್ಗೆ
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 84 ಸಿಎನ್ ಎಸ್ 2011, ದಿನಾಂಕ : 11-08-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ, ಶ್ರೀ ಆರ್. ಶ್ರೀನಿವಾಸಯ್ಯ, ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ದಿನಾಂಕ : 08-10-2010 ರಂದು ಮನವಿ ಸಲ್ಲಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 308 ಎಎಸ್‌ಡಿ 2007, ದಿನಾಂಕ : 29-10-2007 ರನ್ವಯ ಜೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಶ್ರೀ ರಾಮಯ್ಯ ಟಿ.ಪಿ. ಜೇಷ್ಠತಾ ಪಟ್ಟಿ ಸಂಖ್ಯೆ : 1502 ತಹಶೀಲ್ದರ್ ಗ್ರೇಡ್-1 ಹುದ್ದೆಗೆ ದಿನಾಂಕ : 24-12-2007 ರಿಂದ ಜಾರಿಗೆ ಬರುವಂತೆ ಬಡ್ತಿ ನೀಡಲಾಗಿದೆ. ಅದರಂತೆ, ಶ್ರೀ ಆರ್. ಶ್ರೀನಿವಾಸಯ್ಯ, ಜೇಷ್ಠತಾ ಪಟ್ಟಿ ಸಂಖ್ಯೆ : 1490 ತಹಶೀಲ್ದಾರ್ ಗ್ರೇಡ್-2 ಹುದ್ದೆಯಿಂದ ತಹಶೀಲ್ದಾರ್ ಗ್ರೇಡ್-1 ಹುದ್ದೆಗೆ ದಿನಾಂಕ : 24-12-2007 ರಿಂದ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ ಕೋರಿರುತ್ತಾರೆ.

ತಹಶೀಲ್ದಾರ್ ಗ್ರೇಡ್-2 ಹುದ್ದೆಯಿಂದ ಗ್ರೇಡ್-1 ಹುದ್ದೆಗೆ ಮುಂಬಡ್ತಿ ನೀಡುವ ಸಂಬಂಧದಲ್ಲಿ ದಿನಾಂಕ : 29-10-2007 ರಂದು ನಡೆದಿರುವ ಇಲಾಖಾ ಮುಂಬಡ್ತಿ ಸಮಿತಿ ಸಭೆಯು ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದರಿಂದ ಇಲಾಖಾ ಮುಂಬಡ್ತಿ ಸಮಿತಿ ಸಭೆಯ ತೀರ್ಮಾನವನ್ನು ಮುಚ್ಚಿದ ಲಕೋಟೆಯಲ್ಲಿ ಇರಿಸಲು ತೀರ್ಮಾನಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ, ಸದರಿಯವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಪರಿಶೀಲಿಸಿರುವ ಸರ್ಕಾರವು ಸಂಖ್ಯೆ : ಕಂಇ 6 ಎಡಿಇ 2006, ದಿನಾಂಕ : 09-01-2009 ರಂದು ಅವರಿಗೆ Censure ವಾಗ್ದಂಡನೆ ವಿಧಿಸಿ ಆದೇಶಿಸಿರುತ್ತದೆ. ಇದನ್ನು ವಿಧಿಸಿದ ತಕ್ಷಣದಿಂದ ಇದು ಮುಕ್ತಾಯವಾಗಿರುತ್ತದೆ.

ಮೇಲೆ ಓದಲಾದ ಕ್ರ. ಸಂ. (3) ರಲ್ಲಿ ಇವರ ವಿರುದ್ಧ ಹೂಡಲಾಗಿದ್ದ ಮತ್ತೊಂದು ಶಿಸ್ತು ಪ್ರಕರಣದಲ್ಲಿ ತನಿಖೆ ನಡೆಸಿ, ಆರೋಪಿತರು ಮತ್ತು ಇತರ ಸಿಬ್ಬಂದಿಯವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ವಿರುದ್ಧ ಮಾಡಲಾಗಿದ್ದ ಆರೋಪದಿಂದ ಮುಕ್ತಾಯಗೊಳಿಸಿ ಮುಂದಿನ ಸೇವಾ ಅವಧಿಯಲ್ಲಿ ಎಚ್ಚರಿಕೆಯಿಂದ ಕಾರ್ಯನಿರ್ವಹಿಸಲು ಆದೇಶಿಸಿದೆ.

ಮೇಲೆ ಓದಲಾದ ಕ್ರ. ಸಂ. (4) ರಲ್ಲಿ ಶ್ರೀ ಆರ್. ಶ್ರೀನಿವಾಸಯ್ಯ, ಹಿಂದಿನ ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಆರ್.ಸಿ.ಎಲ್ (ಮೆಟ್ರೋ) ಬೆಂಗಳೂರು ಇವರಿಗೆ ದಿನಾಂಕ : 29-10-2007 ರಂದು ಇಲಾಖಾ ಮುಂಬಡ್ತಿ ಸಮಿತಿ ಸಭೆಯು ತೆಗೆದುಕೊಂಡ ತೀರ್ಮಾನದಂತೆ ಅವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ವಯ ದಿನಾಂಕ : 09-01-2009 ರ ಸರ್ಕಾರಿ ಆದೇಶದಲ್ಲಿ ವಾಗ್ದಂಡನೆ ವಿಧಿಸಿದ ದಿನಾಂಕದಿಂದ ಅನ್ವಯಿಸಿ ಮುಚ್ಚಿದ ಲಕೋಟೆಯನ್ನು ತೆರೆದು ಮುಂಬಡ್ತಿಯನ್ನು ನೀಡಲು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ : 11-08-2011 ರ ಪತ್ರದಲ್ಲಿ, ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 633 ಎಎಸ್ ಡಿ 2010, ಬೆಂಗಳೂರು, ದಿನಾಂಕ: 15 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಆರ್. ಶ್ರೀನಿವಾಸಯ್ಯ, ಹಿಂದಿನ ತಹಶೀಲ್ದಾರ್, ಗುಡಿಬಂಡೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್ ಗ್ರೇಡ್–2, ಬಿ.ಎಂ.ಆರ್.ಸಿ.ಎಲ್. (ಮೆಟ್ರೋ) ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ) ನಿಯಮಾವಳಿಗಳು 1978 ರ ನಿಯಮ 2 (1) (ಎ) ರನ್ವಯ ದಿನಾಂಕ : 09–01–2009 ರಿಂದ ಜಾರಿಗೆ ಬರುವಂತೆ ತಹಶೀಲ್ದಾರ್ ಗ್ರೇಡ್–2 ಹುದ್ದೆಯಿಂದ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ವೇತನ ಶ್ರೇಣಿ ರೂ. 14,050 ರೂ. 25,050/– ರಲ್ಲಿ ಪೂರ್ವಾನ್ವಯವಾಗಿ ಪದೋನ್ನತಿ ನೀಡಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ನಿಯುಕ್ತಿಗೊಳಿಸಿ/ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಪಿ.ಆರ್.2858

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಚಿದಾನಂದ, ತಹಶೀಲ್ದಾರ್, ಅರಸೀಕೆರೆ ತಾಲ್ಲೂಕು ಪ್ರಸ್ತುತ ಬೇಲೂರು ತಾಲ್ಲೂಕು ಇವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಪ್ರಸ್ತಾವನೆ :**

ದಿನಾಂಕ : 5–12–2011 ರಂದು ನಡೆದ ವಿಧಾನಸಭಾ ಕಲಾಪದ ಶೂನ್ಯ ವೇಳೆಯಲ್ಲಿ, ಮಾನ್ಯ ಶಾಸಕರಾದ ಶ್ರೀ ಶಿವಲಿಂಗೇಗೌಡರು, ಅರಸೀಕೆರೆ ಕ್ಷೇತ್ರ ಇವರು ಬಸವಜಯಂತಿಯ ಸಿದ್ಧತಾ ಸಭೆಗೆ ಅಂದಿನ ತಹಶೀಲ್ದಾರರು ತಮ್ಮನ್ನು ಆಹ್ವಾನಿಸದೇ ಇದ್ದು, ಸಭೆಗೆ ಹೋದರೂ ಸಹ ಖುರ್ಚಿ ವ್ಯವಸ್ಥೆ ಮಾಡದೇ ನೋವುಂಟು ಮಾಡಿರುತ್ತಾರೆ. ಈ ವಿಷಯವನ್ನು ಮಾನ್ಯ ವಿಧಾನಸಭಾ ಸಭಾಧ್ಯಕ್ಷರಿಗೆ ಎಂಟು ದಿನದ ಹಿಂದೆಯೇ ದೂರು ನೀಡಿದ್ದರೂ ಪ್ರಯೋಜನವಾಗಿರುವುದಿಲ್ಲವೆಂದು, ತಮ್ಮ ಕಣ್ಣೀರನ್ನು ಕೇಳುವವರ್‍ಯಾರು, ಸದನದಲ್ಲಾದರೂ ಸ್ಪೀಕರ್ ನ್ಯಾಯ ಒದಗಿಸಬೇಕೆಂದು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ, ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ, ನಗರಾಭಿವೃದ್ಧಿ ಸಚಿವರು ಮಧ್ಯೆ ಪ್ರವೇಶಿಸಿ ಮಾನ್ಯ ಶಾಸಕರು ಸಭಾಧ್ಯಕ್ಷರಿಗೆ ಪತ್ರ ನೀಡಿದ್ದಾರೆ. ಆದರೆ ಈ ವಿಷಯ ಸರ್ಕಾರದ ಗಮನಕ್ಕೆ ಬಂದಿಲ್ಲ. ಸಂಬಂಧಪಟ್ಟ ತಹಶೀಲ್ದಾರರನ್ನು ಕೂಡಲೇ ಅಮಾನತ್ತು ಮಾಡಿ ತನಿಖೆಗೆ ಆದೇಶಿಸಲಾಗುವುದೆಂದು ಗಮನಕ್ಕೆ ಬಂದಿಲ್ಲ. ಸಂಬಂಧಪಟ್ಟ ತಹಶೀಲ್ದರರನ್ನು ಕೂಡಲೇ ಅಮಾನತ್ತು ಮಾಡಿ ತನಿಖೆಗೆ ಆದೇಶಿಸಲಾಗುವುದೆಂದು ಸದನಕ್ಕೆ ಭರವಸೆ ನೀಡಿರುತ್ತಾರೆ.

ಮೇಲ್ಕಂಡ ಅಂಶದ ಹಿನ್ನೆಲೆಯಲ್ಲಿ, ಅಂದಿನ ಅರಸೀಕೆರೆ ತಾಲ್ಲೂಕು ತಹಶೀಲ್ದಾರರು ಪ್ರಸ್ತುತ ಬೇಲೂರು ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಚಿದಾನಂದ ಇವರು ಶಿಷ್ಟಾಚಾರ ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 81 ಎಡಿಇ 2011, ಬೆಂಗಳೂರು, ದಿನಾಂಕ: 7 ನೇ ಡಿಸೆಂಬರ್ 2011.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವ.ನಿ & ಮೇ) ನಿಯಮಾವಳಿಗಳು 1957 ರ ನಿಯಮ–10 (1)(ಡಿ) ಮತ್ತು 10(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚಿದಾನಂದ, ತಹಶೀಲ್ದಾರ್, ಬೇಲೂರು ತಾಲ್ಲೂಕು ಇವರು ಈ ಹಿಂದೆ ಅರಸೀಕೆರೆ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಶಿಷ್ಟಾಚಾರ ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಇದು ಕರ್ತವ್ಯಲೋಪವೆಂದು ಪರಿಗಣಿಸಿ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳೊಂದಿಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

1) ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ನಿಗದಿಪಡಿಸಿರುವ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.
2) ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಪಿ.ಆರ್.2859

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ. ನಂ. 14, 38, 49, 50, 87 ಮತ್ತು 120 ರ ಸರ್ಕಾರಿ ಜಮೀನುಗಳನ್ನು ಅಕ್ರಮವಾಗಿ ದಾಖಲೆ ಸೃಸ್ಟಿಸಿಕೊಂಡು ದೊಡ್ಡಗುಬ್ಬಿ ಗ್ರಾಮ ಪಂಚಾಯತಿಯಿಂದ ನಮೂನೆ 9 & 90 ರಲ್ಲಿ ಖಾತೆ ಮಾಡಿಕೊಂಡಿರುವ ಬಗ್ಗೆ.

**ಓದಲಾಗಿದೆ:**
1. ಶ್ರೀ ಕೆ. ನಾಗರಾಜ ಬಿನ್ ಕೃಷ್ಣಪ್ಪ, ದೊಡ್ಡಗುಬ್ಬಿ ಗ್ರಾಮ ಇವರ ಮನವಿ ದಿನಾಂಕ : 08–06–2011.
2. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಲ್‌ಎನ್‌ಡಿ (ಇ) ಸಿಆರ್/656/10–11 ದಿನಾಂಕ: 15–06–2011.
3. ಶ್ರೀ ಸೋಮಶೇಖರ್, ಮಾನ್ಯ ಮಾಜಿ ಸಚಿವರು, ಕರ್ನಾಟಕ ಸರ್ಕಾರ ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ವಿಳಾಸಿಸಿ ಬರೆದಿರುವ ದಿನಾಂಕ : 29–08–2011ರ ದೂರಿನ ಪತ್ರ.

**ಪ್ರಸ್ತಾವನೆ :**

ಶ್ರೀ ಕೆ. ನಾಗರಾಜ ಬಿನ್ ಕೃಷ್ಣಪ್ಪ, ದೊಡ್ಡಗುಬ್ಬಿ ಗ್ರಾಮ ಇವರು ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿನ ಪತ್ರದಲ್ಲಿ ದೊಡ್ಡಗುಬ್ಬಿಗ್ರಾಮದ ಸ.ನಂ. 14, 38, 49, 50, 87 ಮತ್ತು 120ರಲ್ಲಿನ ಜಮೀನುಗಳು ಸರ್ಕಾರಿ ಜಮೀನುಗಳಾಗಿದ್ದು, ಹಗಲು ಭೂ ಮಾಫಿಯಾ ವ್ಯಕ್ತಿಗಳು ಸರ್ಕಾರಿ

ಅಧಿಕಾರೀ ನೌಕರರೊಂದಿಗೆ ಶಾಮೀಲಾಗಿ ನಕಲಿ ದಾಖಲೆಗಳನ್ನು ಸೃಷ್ಟಿಸಿಕೊಂಡು ಈ ಜಮೀನುಗಳನ್ನು ಅತಿಕ್ರಮಿಸಿಕೊಂಡಿರುವುದಾಗಿ ದೂರು ನೀಡಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಪತ್ರದಲ್ಲಿ ದೊಡ್ಡಗುಬ್ಬಿ ಗ್ರಾಮದ ಸ.ನಂ. 87, 50, 14 ನಾಡಗೌಡಗೊಲ್ಲಹಳ್ಳಿ ಗ್ರಾಮದ ಸ.ನಂ. 39ರಲ್ಲಿ ಅತಿಕ್ರಮಣ ಒತ್ತುವರಿ ಆಗಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀ ಸೋಮಶೇಖರ್, ಮಾನ್ಯ ಮಾಜಿ ಸಚಿವರು, ಕರ್ನಾಟಕ ಸರ್ಕಾರ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ವ್ಯಾಪ್ತಿಯಲ್ಲಿ ಕೋಟ್ಯಾಂತರ ರೂಪಾಯಿ ಬೆಲೆ ಬಾಳುವ ಸರ್ಕಾರದ ಗೋಮಾಳ ಜಮೀನು ಗುಂಡುತೋಪು, ಹಿಂದೂ ರುದ್ರಭೂಮಿ, ದೊಡ್ಡಗುಬ್ಬಿ ಬೃಹತ್ ಕೆರೆ ಮತ್ತು ಧನಕರುಗಳು ಕುಡಿಯಲು ನಿರ್ಮಿಸಿದ್ದ ನೀರಿನ ಕುಂಟೆಗಳನ್ನು ಸಮಾಜ ವಿರೋಧಿ ಶಕ್ತಿಗಳು ನಕಲಿ ದಾಖಲೆಗಳನ್ನು ಸೃಷ್ಟಿಸಿ ಬಡಾವಣೆಗಳನ್ನು ನಿರ್ಮಿಸಿ ಅಕ್ರಮ ಮಾರಾಟ ದಂದೆಯಲ್ಲಿ ತೊಡಗಿರುತ್ತಾರೆಂದು ದೂರು ನೀಡಿರುತ್ತಾರೆ.

ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 14,38,49,50,87 & 120ರ ಹಾಗೂ ಚಿಕ್ಕಗುಬ್ಬಿ ಗ್ರಾಮದ ಸ.ನಂ. 9ರ ಜಮೀನುಗಳು ಕೆರೆ, ಗೋಮಾಳ, ಗುಂಡುತೋಪು ಮತ್ತು ಅರಣ್ಯ ಇಲಾಖೆಗೆ ಸೇರಿದ ಜಮಿನುಗಳಾಗಿದ್ದು, ಈ ಜಮೀನುಗಳು ಖಾಸಗಿ ವ್ಯಕ್ತಿಗಳಿಂದ ಒತ್ತುವರಿಯಾಗಿರುವುದು ಹಾಗೂ ಅಕ್ರಮವಾಗಿ ಖಾತೆಗಳನ್ನು ಮಾಡಿಸಿಕೊಂಡಿರುವುದು ಹಾಗೂ ಇದರಲ್ಲಿ ಸರ್ಕಾರಿ ಅಧಿಕಾರೀ ನೌಕರರ ಭಾಗಿಯಾಗಿರುವ ಕುರಿತು ಸರ್ಕಾರಕ್ಕೆ ದೂರುಗಳು ಬಂದಿದ್ದು, ದೂರುಗಳಲ್ಲಿನ ಅಂಶಗಳು ಗಂಭೀರ ಸ್ವರೂಪದ್ದಾಗಿರುವುದರಿಂದ, ಈ ಪ್ರಕರಣವನ್ನು ಕೂಲಂಕಷ ತನಿಖೆಗಾಗಿ ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : 235 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ: 17 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ದೊಡ್ಡಗುಬ್ಬಿ ಗ್ರಾಮದ ಸ.ನಂ. 14,38,49,50,87 ಮತ್ತು 120ರಲ್ಲಿನ ಸರ್ಕಾರಿ ಜಮೀನುಗಳನ್ನು ಅಕ್ರಮವಾಗಿ ಅಡ್ಡದಾಖಲೆಗಳನ್ನು (ನಕಲಿ) ಸೃಷ್ಟಿಸಿಕೊಂಡು ಖಾತೆ ಮಾಡಿರುವ ಕುರಿತು ವಿವರವಾದ ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2)ರನ್ವಯ ಪ್ರಕರಣವನ್ನು ಮಾನ್ಯ ಉಪಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ.

ಪ್ರಕರಣದ ಸುಗಮ ತನಿಖೆಗಾಗಿ ಸೂಕ್ತ ಸಹಕಾರ ನೀಡಲು ಹಾಗೂ ಸಂಬಂಧಿಸಿದ ದಾಖಲೆಗಳನ್ನು ಲೋಕಾಯುಕ್ತ ಕಛೇರಿಗೆ ಒದಗಿಸಲು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ರಾಮಸ್ವಾಮಿ**

ಪಿ.ಆರ್.2860

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ.ಮಂ)

## ಕಂದಾಯ ಸಚಿವಾಲಯ

**ವಿಷಯ :** ಋಣಭಾರ ಪ್ರಮಾಣ ಪತ್ರಗಳನ್ನು ಬೆಂಗಳೂರು ನಗರದ ಯಾವುದೇ ಉಪ–ನೋಂದಣಿ ಕಛೇರಿಯಿಂದ ನೀಡುವ ಯೋಜನೆ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಪತ್ರ ಸಂಖ್ಯೆ : Comp/03/2011-12 ದಿನಾಂಕ : 20–05–2011 ಮತ್ತು 29–07–2011.

**ಪ್ರಸ್ತಾವನೆ :**

ಮೇಲೆ ಓದಲಾದ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ತಮ್ಮ ಪ್ರಸ್ತಾವನೆಯಲ್ಲಿ ಸಾರ್ವಜನಿಕರಿಗೆ ಋಣಭಾರ ಪ್ರಮಾಣ ಪತ್ರಗಳನ್ನು ಬೆಂಗಳೂರು ನಗರದ ಯಾವುದೇ ಉಪ–ನೋಂದಣಿ ಕಛೇರಿಯಿಂದ ವಿತರಿಸಲು ಉದ್ದೇಶಿಸಲಾಗಿದ್ದು, ಈ ಸಂಬಂಧವಾಗಿ ತಂತ್ರಾಂಶ ಅಭಿವೃದ್ಧಿ ಪಡಿಸಲು ಮೆ॥ C-DAC, ಪುಣೆರವರನ್ನು ಕೋರಲಾಗಿದ್ದು ಸದರಿ ತಂತ್ರಾಂಶವನ್ನು ಅಭಿವೃದ್ಧಿಪಡಿಸಿ ಪರೀಕ್ಷಿಸಿ ಬೆಂಗಳೂರು ನಗರದ 43 ಉಪನೋಂದಣಿ ಕಛೇರಿಗಳಲ್ಲಿ ಅಳವಡಿಸಲಾಗುವುದು ಹಾಗೂ ಸದರಿ ತಂತ್ರಾಂಶವನ್ನು ಅಭಿವೃದ್ಧಿಪಡಿಸಲು 4 man month effort ರೂ. 1,25,000/– (ರೂಪಾಯಿ ಒಂದು ಲಕ್ಷದ ಇಪ್ಪತ್ತೈದು ಸಾವಿರಗಳು ಮಾತ್ರ) ರಂತೆ ಒಟ್ಟು ರೂ. 5,00,000/– (ರೂಪಾಯಿ ಐದು ಲಕ್ಷಗಳು ಮಾತ್ರ) (ತೆರಿಗೆ ಹೊರತುಪಡಿಸಿ) ವೆಚ್ಚ ಆಗುತ್ತದೆಂದು, ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–02–101–2–04–051 ಅಡಿಯಲ್ಲಿ ಲಭ್ಯವಿರುವ ಅನುದಾನದಿಂದ ಭರಿಸಲು ಅನುಮತಿ ನಿಡಬೇಕೆಂದು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತುರು ಕೋರಿರುತ್ತಾರೆ.

ಮುಂದುವರೆದು, ಋಣಭಾರ ಪ್ರಮಾಣ ಪತ್ರಗಳನ್ನು ಬೆಂಗಳೂರು ನಗರದ ಯಾವುದೇ ಉಪನೋಂದಣಿ ಕಛೇರಿಗಳಿಂದ ನೀಡುವ ಯೋಜನೆಯ ತಂತ್ರಾಂಶವನ್ನು ಪ್ರಸ್ತುತ ಕಾವೇರಿ ಯೋಜನೆಯ ಡಾಟಾ ಉಪಯೋಗಿಸಿಕೊಂಡು ಅಭಿವೃದ್ಧಿಪಡಿಸಬೇಕಾಗಿರುತ್ತದೆ. ಇದಲ್ಲದೇ ಈ ಯೋಜನೆಯು ಕಾವೇರಿ ಯೋಜನೆಯ ಒಂದು ಅಂಗವಾಗಿರುವುದರಿಂದ ಪ್ರಸ್ತುತ ಕಾವೇರಿ ಯೋಜನೆಗೆ ದೊರಕುತ್ತಿರುವ ಸೇವಾ ಗುಣಮಟ್ಟವನ್ನೇ ಈ ಯೋಜನೆಗೂ ಸಹ ಕೊಡಬೇಕಾಗುತ್ತದೆ. ಪ್ರಸ್ತುತ ಕಾವೇರಿ ಯೋಜನೆಯ ತಂತ್ರಾಂಶವನ್ನು ಮೆ.ಸಿ.–ಡಾಕ್‌ರವರು ಅಭಿವೃದ್ಧಿಪಡಿಸಿ 2003–04 ರಿಂದ ನಿರ್ವಹಣೆ ಮಾಡುತ್ತಿರುತ್ತಾರೆ. ಒಂದೇ ತೆರನಾದ ಸೇವಾಗುಣಮಟ್ಟವನ್ನು ಕಾಯ್ದುಕೊಳ್ಳುವ ಸಂಬಂಧ ಈ ಯೋಜನೆಗೆ ತಂತ್ರಾಂಶ ಅಭಿವೃದ್ಧಿ ಹಾಗೂ ನಿರ್ವಹಣೆಯನ್ನು ಮೆ:ಸಿ–ಡಾಕ್ ಸಂಸ್ಥೆಗೆ ವಹಿಸಿಕೊಡುವುದು ಅತ್ಯವಶ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಕೆ.ಟಿ.ಪಿ.ಪಿ. ಕಾಯ್ದೆ ಕಲಂ 4(ಸಿ)ರನ್ವಯ ಟೆಂಡರ್ ಪ್ರಕ್ರಿಯೆ ಮೂಲಕ ಗುತ್ತಿಗೆದಾರರನ್ನು ಆಯ್ಕೆ ಮಾಡಿಕೊಂಡು ತಂತ್ರಾಂಶ ಅಭಿವೃದ್ಧಿಪಡಿಸುವುದರಿಂದ ವಿನಾಯಿತಿ ನೀಡಿ ಸದರಿ ಯೋಜನೆಯ ತಂತ್ರಾಂಶ ಅಭಿವೃದ್ಧಿ ಹಾಗೂ ನಿರ್ವಹಣೆಯನ್ನು ಮೆ.ಸಿ.–ಡಾಕ್ ಸಂಸ್ಥೆಗೆ ವಹಿಸಿಕೊಡಲು ಮತ್ತು ರೂ. 5.00 ಲಕ್ಷ ಮೊತ್ತವನ್ನು ತಂತ್ರಾಂಶ ಅಭಿವೃದ್ಧಿಗಾಗಿ ಪಾವತಿಸಲು ಆದೇಶ ನೀಡಬೇಕೆಂದು ಕೋರಿದ್ದಾರೆ.

ಸದರಿ ತಂತ್ರಾಂಶ ಅಭಿವೃದ್ಧಿಗೆ 4 man month efforts (ಒಬ್ಬರಿಗೆ ರೂ. 1,25,000/– ರಂತೆ ಒಟ್ಟು ರೂ. 5.00 ಲಕ್ಷ) ಬೇಕಾಗುವುದೆಂದು ಮೆ॥ ಸಿ–ಡಾಕ್, ಪುಣೆ, ಸಂಸ್ಥೆಯು ಕೋರಿರುವುದಕ್ಕೆ ಶ್ರೀ ಆರ್. ಚಂದ್ರಶೇಖರ್, ಅಸಿಸ್ಟೆಂಟ್ ಪ್ರೊಫೆಸರ್, ಐಐಟಿ, ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು

ಇವರು ದಿನಾಂಕ : 04–07–2011ರ ಇ–ಮೇಲ್ ಮೂಲಕ ಪತ್ರದನ್ವಯ ಸಲ್ಲಿಸಿದ ಸಮರ್ಥನೆಯ ಪತ್ರವನ್ನು ಒದಗಿಸಿದ್ದು ಶ್ರೀ ಆರ್. ಚಂದ್ರಶೇಖರ್ ರವರು ಇ–ಆಡಳಿತ ಇಲಾಖೆಯ ತಾಂತ್ರಿಕ ಸದಸ್ಯರ ಪಟ್ಟಿಯಲ್ಲಿ ಒಬ್ಬರಾಗಿದ್ದಾರೆಂದೂ ಸಹ ತಿಳಿಸಿದ್ದಾರೆ.

ಕೆ.ಟಿ.ಪಿ.ಪಿ. ಕಾಯ್ದೆ ಕಲಂ 4(ಸ) ಉದ್ಧೃತ ಭಾಗವು ಈ ಕೆಳಕಂಡಂತಿದೆ :

4. Exceptions to acceptability – the provisions of Chapter II shall not apply to Procurement of goods and services –

(a) xxx

(b) xxx

(c) Where the procuring entity having procured goods, services or technology from a supplier or contractor determines that additional supplies must be procured from the same supplier or contractor fro reasons of standardization and compatiability with the existing goods, service or technology.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 94 ಮುನೋಮು 2011, ಬೆಂಗಳೂರು, ದಿನಾಂಕ: 11 ನೇ ನವೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಾವೇರಿ ಯೋಜನೆಯ ತಂತ್ರಾಂಶವನ್ನು ಮೆ॥ ಸಿ–ಡಾಕ್, ಪುಣೆ ಸಂಸ್ಥೆಯು ಅಭಿವೃದ್ಧಿಪಡಿಸಿ ನಿರ್ವಹಣೆ ಮಾಡುತ್ತಿರುವುದರಿಂದ ಮತ್ತು ಪ್ರಸ್ತುತ ಸಾರ್ವಜನಿಕರಿಗೆ ಋಣಭಾರ ಪ್ರಮಾಣ ಪತ್ರಗಳನ್ನು ಬೆಂಗಳೂರು ನಗರದ ಯಾವುದೇ ಉಪ–ನೋಂದಣಿ ಕಛೇರಿಯಿಂದ ವಿತರಿಸುವ ಸಂಬಂಧ ತಂತ್ರಾಂಶ ಅಭಿವೃದ್ಧಿ ಪಡಿಸಲು ಮೆ: C-DAC, ಪುಣೆರವರಿಗೆ ಸದರಿ ತಂತ್ರಾಂಶವನ್ನು ಅಭಿವೃದ್ಧಿಪಡಿಸಿ ಪರೀಕ್ಷಿಸಿ ಬೆಂಗಳೂರು ನಗರದ 43 ಉಪನೋಂದಣಿ ಕಛೇರಿಗಳಲ್ಲಿ ಅಳವಡಿಸಲು ಆಗೂ ಸದರಿ ತಂತ್ರಾಂಶವನ್ನು ಅಭಿವೃದ್ಧಿಪಡಿಸಲು 4 man month effort ರೂ. 1,25,000/– (ರೂಪಾಯಿ ಒಂದು ಲಕ್ಷದ ಇಪ್ಪತ್ತೈದು ಸಾವಿರಗಳು ಮಾತ್ರ) ರಂತೆ ಒಟ್ಟು ರೂ. 5,00,000/– (ರೂಪಾಯಿ ಐದು ಲಕ್ಷಗಳು ಮಾತ್ರ) (ತೆರಿಗೆ ಹೊರತುಪಡಿಸಿ) ಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಅಧಿನಿಯಮ 1999ರ ಕಲಂ 4(ಸಿ)ರನ್ವಯ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ "2030-02-101-2-04-Charges of Supply of registered documents- 051 General Expenses" ಅಡಿಯಲ್ಲಿ ಲಭ್ಯವಿರುವ ಅನುದಾನದಿಂದ ಭರಿಸಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.2861

## ಕಂದಾಯ ಸಚಿವಾಲಯ

**ವಿಷಯ** : ಕೊಡಗು ಜಿಲ್ಲೆಯ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡ ಕಾಮಗಾರಿಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ ಕಂಇ 31 ಡಬ್ಲ್ಯೂಬಿಆರ್ 2008, ದಿನಾಂಕ 08/11/2011.

2) ಪತ್ರ ಸಂಖ್ಯೆ: ಕಗೃಮಂ/ಗೃಅ/ಜಿ.ಸಂ/ಮಡಿಕೇರಿ/1273/2011–12, ದಿನಾಂಕ 24/11/2011.

**ಪ್ರಸ್ತಾವನೆ:**

ಕೊಡಗು ಜಿಲ್ಲೆಯ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ರೂ.12.50 ಕೋಟಿಗಳ ವೆಚ್ಚದಲ್ಲಿ ನಿರ್ಮಿಸುವುದರ ಅಂದಾಜುಗಳಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರ ಬರೆಯುತ್ತಾ ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕು ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡ ನಿರ್ಮಿಸುವ ಕುರಿತಂತೆ ದಿನಾಂಕ 28/04/2011 ರಂದು ಟೆಂಡರ್ ಕರೆದ ಮೇರೆಗೆ ಇಬ್ಬರು ಗುತ್ತಿಗೆದಾರರು ಟೆಂಡರ್‌ಗಳನ್ನು ಸಲ್ಲಿಸಿದ್ದು ಪುನಃ ದಿನಾಂಕ 03/10/2011 ರಂದು ತಿದ್ದುಪಡಿ ಟೆಂಡರನ್ನು ಪ್ರಕಟಿಸಲಾಗಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದರು ಆ ಸಂಬಂಧದ ವಿವರ ಈ ಕೆಳಗಿನಂತೆ ಇರುವುದಾಗಿ ತಿಳಿಸಿರುತ್ತಾರೆ.

| Sl. No. | Name of the agency | Amount put in tender (In Rs.) | Rate quoted by the agency (In Rs.) | Percentage |
|---|---|---|---|---|
| 1. | Sri G.S.N.Raju, Bangalore | 10,55,96,833.00 | 12,01,90,315.00 | 13.82% |
| 2. | Sri V. Arunkumar, Bhadravathi | | 12,58,00,000.00 | 19.13% |

ಮುಂದುವರೆದು, ಗುತ್ತಿಗೆದಾರರ ಪೈಕಿ ಶ್ರೀ ಜಿ.ಎಸ್.ಎನ್. ರಾಜು, ಬೆಂಗಳೂರು ಇವರು ಅತಿ ಕಡಿಮೆ ಮೊತ್ತ ರೂ. 12,01,90,315.00 ನಮೂದಿಸಿದ್ದು, ಇದು ಟೆಂಡರಿಗಿಟ್ಟ ಮೊತ್ತಕ್ಕಿಂತ ಶೇ.13.82 ರಷ್ಟು ಹೆಚ್ಚಾಗಿದ್ದರಿಂದ ಸಂಧಾನದ ನಂತರ ರೂ. 11,56,28,532.00 ಗೆ ಕಾಮಗಾರಿಯನ್ನು ನಿರ್ವಹಿಸಲು ಒಪ್ಪಿದ್ದು, ಈ ಮೊತ್ತವು ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ.9.5 ರಷ್ಟು ಹೆಚ್ಚಿಗೆ ಇದ್ದು, ಸದರಿ ಮೊತ್ತವು ರೂ. 11,56,28,532.00 ಆಗುವುದಾಗಿ ವರದಿ ಮಾಡುತ್ತಾ ಉಲ್ಲೇಖಿತ ಟೆಂಡರಿಗೆ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆ ಮೇರೆಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಡಬ್ಲ್ಯೂಬಿಆರ್ 2008 ಬೆಂಗಳೂರು, ದಿನಾಂಕ: 30/11/2011**

ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕು ಕರ್ಣಂಗೇರಿ ಗ್ರಾಮದ ಸರ್ವೆ ನಂ. 471.1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಗೃಹ ಮಂಡಳಿಯು ಕರೆದ ಟೆಂಡರ್ ಪರಿಶೀಲನಾ ಸಮಿತಿ ಪರಿಶೀಲಿಸಿ ಒಪ್ಪಿರುವ ಶ್ರೀ ಜಿ.ಎಸ್.ಎನ್. ರಾಜು. ಬೆಂಗಳೂರು ಇವರು ಟೆಂಡರ್‌ಗಿಟ್ಟ ಮೊತ್ತವಾದ ರೂ. 10,55,96,833.00 ಮೇಲೆ ಶೇ.9.5 ರಷ್ಟು ಹೆಚ್ಚಾದ ರೂ. 11,56,28,532.00 (ರೂಪಾಯಿ ಹನ್ನೊಂದು ಕೋಟಿ ಐವತ್ತಾರು ಲಕ್ಷದ ಇಪ್ಪತ್ತೆಂಟು ಸಾವಿರದ ಐನೂರ ಮೂವತ್ತೆರಡು ಮಾತ್ರ) ಮೊತ್ತದ ಟೆಂಡರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

11. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
12. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳತಕ್ಕದ್ದಲ್ಲ.
13. ಸಕ್ಷಮ ಪ್ರಾಧಿಕಾರವು ಕಾಮಗಾರಿಗಳ ಪರಿವೀಕ್ಷಣೆ ನಡೆಸಿ ಗುಣಮಟ್ಟವನ್ನು ಕಾಯ್ದುಕೊಳ್ಳತಕ್ಕದ್ದು.
14. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ (1999) ಹಾಗೂ ಅದರಡಿ ರೂಪಿಸಿರುವ ನಿಯಮಗಳಲ್ಲಿ ನಮೂದಿಸಿರುವ ಕಾರ್ಯ ವಿಧಾನ ಪಾಲಿಸತಕ್ಕದ್ದು.

ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ).

ಪಿ.ಆರ್. ನಂ. 2862

## ಕಂದಾಯ ಸಚಿವಾಲಯ

**ವಿಷಯ** : ಬಂಗಾರಪೇಟೆ ತಾಲ್ಲೂಕು, ಬೂದಿಕೋಟೆ ಹೋಬಳಿ, ಬಲಮಂದೆ, ಪಲಮಡಗು, ಯರಗೋಳು ಗ್ರಾಮಗಳ ಸರ್ಕಾರಿ ಜಮೀನನ್ನು ಯರಗೋಳು ಚೆಕ್ ಡ್ಯಾಮ್ ನಿರ್ಮಾಣ ಮಾಡುವ ಯೋಜನೆಗೆ ಕರ್ನಾಟಕ ನಗರ ನೀರು ಸರಬರಾಜು ಮಂಡಳಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ** : ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/84/09–10 ದಿ:01.03.2010 ಮತ್ತು 28.04.2011.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ರವರು ದಿ:01.03.2010 ಮತ್ತು 28.04.2011ರ ಪತ್ರಗಳಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಕೋಲಾರ ಜಿಲ್ಲೆಯಲ್ಲಿ ಕುಡಿಯುವ ನೀರಿನ ತೀವ್ರ ಸಮಸ್ಯೆಯನ್ನು ಶಾಶ್ವತವಾಗಿ ಪರಿಹರಿಸುವ ದೃಷ್ಟಿಯಿಂದ ಕೋಲಾರ ಜಿಲ್ಲೆಯ ಕೋಲಾರ, ಮಾಲೂರು ಮತ್ತು ಬಂಗಾರಪೇಟೆ ಪಟ್ಟಣಗಳಿಗೆ ಹಾಗೂ ಇವುಗಳ ಮಾರ್ಗ ಮಧ್ಯೆ ಬರುವ 45 ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಕಲ್ಪಿಸಲು ಬಂಗಾರಪೇಟೆ ತಾಲ್ಲೂಕಿನ ಯರಗೋಳು ಗ್ರಾಮದ ಬಳಿ ಮಾರ್ಕಂಡೇಯ ನದಿಗೆ ಅಡ್ಡಲಾಗಿ ಅಣೆಕಟ್ಟೆ ಕಟ್ಟಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಉದ್ದೇಶಿಸಿರುತ್ತದೆ. ಈ ಯೋಜನೆಗೆ ಸಂಬಂಧಿಸಿದಂತೆ ಪೈಪ್‌ಲೈನ್ ಕಾಮಗಾರಿ ಹಾಗೂ ಇತರೆ ಕಾಮಗಾರಿಗಳು ಈಗಾಗಲೇ ಪ್ರಾರಂಭವಾಗಿದ್ದು, ಮುಖ್ಯ ಅಣೆಕಟ್ಟು ಕಾಮಗಾರಿ ಪ್ರಾರಂಭವಾಗಲು ಬಾಕಿ ಇರುತ್ತದೆ. ಇದಕ್ಕಾಗಿ ಒಟ್ಟು 308.37 ಎಕರೆ ಜಮೀನು ಅಗತ್ಯವಾಗಿರುತ್ತದೆ.124.10 ಎಕರೆ ಖಾಸಗಿ ಒಡೆತನಕ್ಕೆ ಸೇರಿದ್ದು, ಇದನ್ನು ಭೂ ಸ್ವಾಧೀನ ಪಡಿಸಿಕೊಳ್ಳಲು ಅಗತ್ಯವಾದ ಭೂ ಸ್ವಾಧೀನ ಪ್ರಕ್ರಿಯೆ ಪ್ರಾರಂಭವಾಗಿರುತ್ತದೆ. ಭೂ ಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಿರುವ 124.10 ಎಕರೆ ಜಮೀನನ್ನು ಬಿಟ್ಟು ಉಳಿದ 184.27 ಎಕರೆ ಸರ್ಕಾರಿ ಜಮೀನಾಗಿದ್ದು, ಸದರಿ ಜಮೀನಿನ ವಿವರ ಈ ಕೆಳಕಂಡಂತಿರುತ್ತದೆ ಎಂಬುದಾಗಿ ವರದಿ ಮಾಡಿರುತ್ತಾರೆ.

| ಗ್ರಾಮ | ಸ.ನಂ. | ಜಮೀನಿನ ವರ್ಗೀಕರಣ ಆರ್.ಟಿ.ಸಿ.ಯ ಕಾಲಂ 9ರಲ್ಲಿ ನಮೂದಿಸಿರುವಂತೆ | ವರ್ಗಾಯಿಸಬೇಕಾದ ವಿಸ್ತೀರ್ಣ (ಎ/ಗು) |
|---|---|---|---|
| ಯರಗೋಳು | 52 | ಸರ್ಕಾರಿ ಗೋಮಾಳ | 73.29 |
| ಪಲಮಡುಗು | 20 | ಸರ್ಕಾರಿ ಗೋಮಾಳ | 14.20 |
| ಪಲಮಡಗು | 21 | ಅರಣ್ಯ | 56.28 |
| ಬಲಮಂದೆ | 214 | ಹಲ್ಲು ಬನ್ನಿ ಖರಾಬು | 38.25 |
| ಬಲಮಂದೆ | 215 | ಗೋಮಾಳ | 1.05 |
| | | **ಒಟ್ಟು** | **184.27** |

2) ಮೇಲ್ಕಂಡ 5 ಸರ್ವೆ ನಂಬರುಗಳ ಪೈಕಿ ಪಲಮಡಗು ಗ್ರಾಮದ ಸ.ಸಂ.21ರಲ್ಲಿನ 56.28 ಎಕರೆ ಜಮೀನು ಅರಣ್ಯ ಜಮೀನಾಗಿದ್ದು, ಸದರಿ ಜಮೀನು ಹೊರತುಪಡಿಸಿ ಉಳಿದ 127.39 ಎಕರೆ ಜಮೀನು ಸರ್ಕಾರಿ ಗೋಮಾಳ ಜಮೀನಾಗಿದ್ದು, ಸದರಿ ಜಮೀನು ಪೂರ್ಣ ಕಂದಾಯ ಇಲಾಖೆಗೆ ಸೇರಿದ ಜಮೀನಾಗಿರುತ್ತದೆ. ಸದರಿ ಗ್ರಾಮಗಳಲ್ಲಿ ಇರುವ ಜಾನುವಾರುಗಳಿಗೆ ಸಾಕಷ್ಟು ಗೋಮಾಳ ಇರುವುದಾಗಿ ವರದಿ ಮಡುತ್ತಾ, ಚೆಕ್ ಡ್ಯಾಮ್ ನಿರ್ಮಿಸುವುದಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಒಳಚರಂಡಿ ಮಂಡಳಿ ಇವರಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

3) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಂದು ಸ್ವಾಯತ್ತ ಸಂಸ್ಥೆಯಾಗಿದ್ದು, ಸದರಿ ಸಂಸ್ಥೆಗೆ ಪ್ರಸ್ತಾಪಿತ ಜಮೀನನ್ನು ಉಚಿತವಾಗಿ ಹಾಗೂ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಲು ಅವಕಾಶವಿರುವುದಿಲ್ಲ. ಸದರಿ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆಯ ಶೇ. 50ರಷ್ಟನ್ನು ವಿಧಿಸಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರಿಗೆ ಮಂಜೂರು ಮಾಡಲು ಅವಕಾಶವಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 67 ಎಲ್‌ಜಿಕೆ 2010, ಬೆಂಗಳೂರು, ದಿನಾಂಕ: 08/11/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಂಗಾರಪೇಟೆ ತಾಲ್ಲೂಕು, ಯರಗೋಳು ಗ್ರಾಮದ ಸ.ನಂ. 52 ರಲ್ಲಿ 73.29 ಎಕರೆ, ಪಲಮಡಗು ಗ್ರಾಮದ ಸ.ನಂ.20ರಲ್ಲಿ 14.20 ಎಕರೆ, ಬಲಮಂದೆ ಗ್ರಾಮದ ಸ.ನಂ. 214ರಲ್ಲಿ 38.25 ಎಕರೆ ಮತ್ತು ಸ.ನಂ.215 ರಲ್ಲಿ 1.05 ಎಕರೆ, ಒಟ್ಟು 127.39 ಎಕರೆ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಸದರಿ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ. 50ರಷ್ಟನ್ನು ವಿಧಿಸಿ ಸಾರ್ವಜನಿಕರ ಕುಡಿಯುವ ನೀರಿನ ವ್ಯವಸ್ಥೆಗಾಗಿ ಚೆಕ್ ಡ್ಯಾಮ್ ನಿರ್ಮಾಣ ಮಾಡುವ ಉದ್ದೇಶಕ್ಕಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕೆ ರಾಮಸ್ವಾಮಿ**

ಪಿ.ಆರ್. ನಂ. 2863

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂ).

## ಕಂದಾಯ ಸಚಿವಾಲಯ

**ವಿಷಯ** : ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಖಾಂಡ್ಯ ಹೋಬಳಿ, ದೇವದಾನ ಗ್ರಾಮದ ಸರ್ವೆ ನಂ. 362 ರಲ್ಲಿ 19-00 ಎಕರೆ ಜಮೀನನ್ನು ಕಿರು ಜಲ ವಿದ್ಯುತ್ ಯೋಜನೆ ಸ್ಥಾಪನೆಗಾಗಿ ಮೆ: ಐಶ್ವರ್ಯ ಪವರ್ ಪ್ರೈ.ಲಿ. ಬೆಂಗಳೂರು ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ** : 1) ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (2) ಸಿಆರ್ 52/10-11 ದಿನಾಂಕ: 07-06-2011

**2)** ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 78 ಎಲ್‌ಜಿಪಿ 2009 ದಿ: 04.01.2011

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ರವರ ದಿ: 07.06.2011ರ ಪತ್ರದಲ್ಲಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಖಾಂಡ್ಯ ಹೋಬಳಿ, ದೇವದಾನ ಗ್ರಾಮದ ಸ.ನಂ. 362ರಲ್ಲಿ 19-00 ಎಕರೆ ಗೋಮಾಳ ಜಮೀನನ್ನು ಕಿರು ಜಲ ವಿದ್ಯುತ್ ಯೋಜನೆ ಸ್ಥಾಪನೆಗಾಗಿ ಮೆ: ಐಶ್ವರ್ಯ ಪವರ್ ಪ್ರೈ.ಲಿ. ಬೆಂಗಳೂರು ರವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮೋದನೆ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯಲ್ಲಿ, ಸರ್ಕಾರವು ಮೆ: ಐಶ್ವರ್ಯ ಪವರ್ ಪ್ರೈ.ಲಿ. ಕಂಪನಿಗೆ ಚಿಕ್ಕಮಗಳೂರು ತಾಲ್ಲೂಕು, ಖಾಂಡ್ಯ ಹೋಬಳಿ, ದೇವದಾನ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 2.00ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ, ಅನುಷ್ಠಾನ ಮಾಡಲು ಸರ್ಕಾರಿ ಆದೇಶ ಸಂಖ್ಯೆ: ಇಎನ್ 193 ಎನ್‌ಸಿಇ 2008 ದಿ: 21.07.008ರಲ್ಲಿ ಅನುಮತಿ ನೀಡಲಾಗಿದೆ. ಸದರಿ ಯೋಜನೆಯು ದೇವದಾನ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುತ್ತಿದ್ದು, ಯೋಜನೆಯ ಅನುಷ್ಠಾನಕ್ಕೆ ಯಾವುದೇ ಅಭ್ಯಂತರ ಇರುವುದಿಲ್ಲವೆಂದು, ಯೋಜನೆಯ ಅನುಷ್ಠಾನಗೊಳಿಸುವಾಗ ಪರಿಸರಕ್ಕೆ ಯಾವುದೇ ಮಾಲಿನ್ಯ ಉಂಟಾಗದಂತೆ ನೋಡಿಕೊಳ್ಳಬೇಕೆಂಬ ನಿಬಂಧನೆಗೊಳಪಟ್ಟು ದಿ: 06.05.2009ರಂದು ನಿರಾಕ್ಷೇಪಣ ಪತ್ರವನ್ನು ನೀಡಿರುವುದಾಗಿ ತಿಳಿಸಿರುತ್ತಾರೆ. ದಿ: 15.10.2008ರಲ್ಲಿ ಮೆ: ಐಶ್ವರ್ಯ ಪವರ್ ಪ್ರೈ.ಲಿ. ಕಂಪನಿಯವರು ಸರ್ಕಾರ ಹಾಗೂ ಕಂಪನಿ ಇವರುಗಳು ಮಾಡಿಕೊಂಡಿರುವ ಒಪ್ಪಂದದಂತೆ ಯೋಜನೆ ಅನುಷ್ಠಾನಕ್ಕಾಗಿ 30 ವರ್ಷಗಳ ಅವಧಿಗೆ ಯೋಜನೆ ನಿರ್ವಹಿಸಲು ಒಪ್ಪಂದ ಮಾಡಿಕೊಳ್ಳಲಾಗಿದೆ.

ಪ್ರಸ್ತಾವಿತ ದೇವದಾನ ಗ್ರಾಮದ ಸ.ನಂ. 362ರಲ್ಲಿ ಒಟ್ಟು 204.37 ಎಕರೆ ಗೋಮಾಳ ಜಮೀನಿದ್ದು, ಈ ಪೈಕಿ 2.20 ಎಕರೆ ಪ್ರದೇಶವನ್ನು ಖಾಸಗಿ ವ್ಯಕ್ತಿಗಳಾದ ಶ್ರೀ ಎನ್.ಸಿ. ಅನೂಪ್ ಕುಮಾರ್ ಮತ್ತು ಶ್ರೀ ಸಿ. ಅರುಣ್ ಕುಮಾರ್‌ರವರುಗಳು ಒತ್ತುವರಿ ಮಾಡಿ ಸ್ವಾಧೀನ ಅನುಭವದಲ್ಲಿದ್ದು ಒತ್ತುವರಿ ಜಮೀನನ್ನು ಬಿಟ್ಟುಕೊಡಲು ಒಪ್ಪಿಗೆ ನೀಡಿರುತ್ತಾರೆ. ಭದ್ರಾದಂಡೆಯ ಮೇಲೆ 19-00 ಎಕರೆ ಜಮೀನನ್ನು ಯೋಜನೆಗೆ ಉಪಯೋಗಿಸಿಕೊಳ್ಳಲು ಯಾವುದೇ ತಂಟೆ ತಕರಾರು ಇರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಗೋಮಾಳ ಜಮೀನಾಗಿದ್ದು, ಕರ್ನಾಟಕ ಭೂ ಕಂದಾಯ ನಿಯಮಾವಳಿಗಳು 1966ರ ನಿಯಮ 97(1)ರಂತೆ ಪ್ರತಿಯೊಂದು ಗ್ರಾಮದಲ್ಲಿ 100 ಜಾನುವಾರುಗಳಿಗೆ 12 ಹೆಕ್ಟೇರ್ ಗೋಮಾಳ ಜಮೀನನ್ನು ಮೇವಿಗಾಗಿ ಕಾಯ್ದಿರಿಸಬೇಕಾಗಿದೆ. ಸದರಿ ಗ್ರಾಮದಲ್ಲಿ 2089 ಜಾನುವಾರುಗಳಿದ್ದು, ನಿಯಮಾನುಸಾರ 600-00 ಎಕರೆ ಗೋಮಾಳ ಜಮೀನು ಇರಬೇಕಾಗಿದ್ದು, 1489 ಎಕರೆ ಹೆಚ್ಚಿನ ಗೋಮಾಳ ಇರುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ.

ಸದರಿ ಪ್ರದೇಶದಲ್ಲಿ ಕಾಡುಜಾತಿಯ ಒಂದು ಗರಿಗೆ, ಒಂದು ನೇರಲೆ, ಒಂದು ತಾರೆ ಮರಗಳಿದ್ದು, ಬೆಲೆಬಾಳುವ ಮರಗಳಿರುವುದಿಲ್ಲ. ಉಪಅರಣ್ಯ ಸಂರಕ್ಷಣಾಧಿಕಾರಿಗಳು, ಕೊಪ್ಪ ರವರು ಪ್ರಕಟಿಸಿರುವ ಪಟ್ಟಿಯಲ್ಲಿ ಈ ಸರ್ವೆ ನಂ. ಅರಣ್ಯ/ ಡೀಮ್ಡ್ ಫಾರಸ್ಟ್‌ಗೆ ಸೇರಿರುವುದಿಲ್ಲ. ಪ್ರಸ್ತಾಪಿತ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ. 60,000/-ಗಳಿದ್ದು ವ್ಯವಸಾಯೇತರ ಉದ್ದೇಶದ ಪರಿವರ್ತನೆಗೆ ರೂ. 21,780/- ರೂಗಳಂತೆ

ಒಟ್ಟು ರೂ. 81.780/– ರೂಗಳನ್ನು ನಿಗಧಿಪಡಿಸಿ, ಒಟ್ಟು ಮೊಬಲಗಿನ ಶೇ. 5ನ್ನು ಅಭಿವೃದ್ಧಿಯಾಗದ ವ್ಯವಸಾಯೇತರ ಜಮೀನಿನ ಬೆಲೆ ಆಧರಿಸಿ, ಎಕರೆ ಒಂದಕ್ಕೆ ವಾರ್ಷಿಕ ಗುತ್ತಿಗೆ ಮೊತ್ತ ರೂ. 4899/– ರೂಗಳನ್ನು ಅಂದರೆ, ಎಕರೆ ಒಂದಕ್ಕೆ ರೂ. 5000/–ಗಳ ವಾರ್ಷಿಕ ಬಾಡಿಗೆ ವಿಧಿಸಿ, ಮೆ: ಐಶ್ವರ್ಯ ಪ್ರೈ.ಲಿ. ಬೆಂಗಳೂರು ಇವರಿಗೆ ಕಿರು ಜಲ ವಿದ್ಯುತ್ ಉತ್ಪಾದನೆಗಾಗಿ ಸಂಬಂಧಿಸಿದ ಕೆಲಸಗಳಿಗೆ ಮಾತ್ರ ಉಪಯೋಗಿಸುವ ಷರತ್ತಿಗೆ ಒಳಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ನಿಯಮ 19(1)ಡಿ ಪ್ರಕಾರ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರದ ಪೂರ್ವಾನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2)ರ ಕಂದಾಯ ಇಲಾಖೆ ಸುತ್ತೋಲೆಯಲ್ಲಿ ದಿ: 03.11.2011ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ನಡೆದ ಸಭೆಯಲ್ಲಿ ಇಂಧನ ಇಲಾಖೆಯ ಕೋರಿಕೆಯಂತೆ ಇನ್ನು ಮುಂದೆ ಸರ್ಕಾರಿ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ನಿಯಮಿತ ಇವರಿಗೆ ಮಂಜೂರು ಮಾಡುವ ಬದಲಾಗಿ ಯೋಜನೆ ಕೈಗೊಳ್ಳುವ ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ನಿರ್ಣಯಿಸಲಾಗಿರುತ್ತದೆ.

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗದಲ್ಲಿ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 41 ಎಲ್‌ಜಿಯು 2011, ಬೆಂಗಳೂರು ದಿನಾಂಕ:11.11.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಖಾಂಡ್ಯ ಹೋಬಳಿ, ದೇವದಾನ ಗ್ರಾಮದ ಸ.ನಂ. 362 ರಲ್ಲಿ 19–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಾವಳಿಗಳು 1966ನಿಯಮ 97(4)ಅಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 21ರಡಿ ಪ್ರಚಲಿತ ಮಾರುಕಟ್ಟೆ ದರದ ಶೇ.10ರಷ್ಟು ಗುತ್ತಿಗೆ ದರ ನಿಗಧಿಪಡಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಗುತ್ತಿಗೆ ದರವನ್ನು ಶೇ.10 ರಷ್ಟು ಹೆಚ್ಚಿಸುವ ಷರತ್ತಿಗೆ ಒಳಪಟ್ಟು ಸದರಿ 19–00 ಎಕರೆ ಸರ್ಕಾರಿ ಜಮೀನನ್ನು ಉದ್ದೇಶಿತ ಕಿರು ಜಲವಿದ್ಯುತ್ ಯೋಜನೆ ಸ್ಥಾಪನೆಗಾಗಿ ಮಾತ್ರ ಬಳಸಬೇಕೆಂದು ಹಾಗೂ ಯಾವುದೇ ಬೇರೆ ಉದ್ದೇಶಕ್ಕಾಗಿ ಬಳಸಿಕೊಳ್ಳಕೂಡದೆಂದು ಷರತ್ತು ವಿಧಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 19(1)ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮೆ: ಐಶ್ವರ್ಯ ಪ್ರೈ.ಲಿ. ಬೆಂಗಳೂರು ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ 848 ವೆಚ್ಚ–7/2011 ದಿ: 26.9.2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೀತಾ ರಮೇಶ್**

ಪಿ.ಆರ್. ನಂ. 2864

ಸರ್ಕಾರದ ಜಂಟಿ ಕಾರ್ಯದರ್ಶಿ

(ಭೂಮಂ, ಭೂಕಂ. ಮತ್ತು ಸೇವೆಗಳು)

ಕಂದಾಯ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ** : ಕೊಡಗು ಜಿಲ್ಲಾ ಕೇಂದ್ರವಾದ ಮಡಿಕೇರಿಯಲ್ಲಿ ಜಿಲ್ಲಾ ಕಛೇರಿಗಳ ಸಂಕೀರ್ಣ ಕಟ್ಟಡ ಕಾಮಗಾರಿಯ ಪರಿಷ್ಕೃತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ ಕಂಇ 31 ಡಬ್ಲ್ಯೂಬಿಆರ್ 2007, ದಿನಾಂಕ 09/10/2009.
2) ಸರ್ಕಾರದ ಆದೇಶ ಸಂಖ್ಯೆ ವಾಕೈ/6/ಕೈಯೋವಿ 2010, ದಿನಾಂಕ 3/7/2010. ಕಂಇ
3) ಪತ್ರ ಸಂಖ್ಯೆ ಕಗೃಮಂ/ಮುಅ/ಮಡಿಕೇರಿ/ಜಿಕ 1151/010–11, ದಿನಾಂಕ 30/09/2010.
4) ಪತ್ರ ಸಂಖ್ಯೆ ಕಗೃಮಂ/ಮುಅ/ಮಡಿಕೇರಿ/ಜಿಕ 222/2010–11, ದಿನಾಂಕ 16/05/2011.

**ಪ್ರಸ್ತಾವನೆ:**

ಜಿಲ್ಲಾ ಮಟ್ಟದ ಎಲ್ಲಾ ಇಲಾಖೆಗಳ ಕಛೇರಿಗಳು ಒಂದೇ ಕಟ್ಟಡದಲ್ಲಿರುವಂತೆ ಜಿಲ್ಲಾ ಕೇಂದ್ರದಲ್ಲಿ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ನಿರ್ಮಿಸುವುದು ಸರ್ಕಾರದ ನೀತಿಯಾಗಿರುತ್ತದೆ. ಅದರಂತೆ, ಕೊಡಗು ಜಿಲ್ಲಾ ಕೇಂದ್ರವಾದ ಮಡಿಕೇರಿಯಲ್ಲಿ ಕರವಾಲೆಬಾಡಗಾ ಗ್ರಾಮದ 5.19 ಎಕರೆ ಪ್ರದೇಶದಲ್ಲಿ ರೂ.9.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಜಿಲ್ಲಾ ಕಛೇರಿಗಳ ಸಂಕೀರ್ಣ ಕಟ್ಟಡವನ್ನು ನಿರ್ಮಾಣ ಮಾಡಲು ಕಾಮಗಾರಿಯನ್ನು ಕರ್ನಾಟಕ ಗೃಹ ಮಂಡಳಿಗೆ ವಹಿಸುವುದರೊಂದಿಗೆ ಪ್ರಥಮವಾಗಿ ರೂ.1.00 ಕೋಟಿಗಳ ಅನುದಾನವನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ಕೊಡಗು ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ಮಡಿಕೇರಿಯ ಕರವಾಲೆಬಾಡಗಾ ಗ್ರಾಮದ 5.19 ಎಕರೆ ವಿಸ್ತೀರ್ಣದ ಜಮೀನಿಗೆ ಬದಲಾಗಿ ಮಡಿಕೇರಿ ತಾಲ್ಲೂಕು ಕರ್ಣಂಗೇರಿಯ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನಿನಲ್ಲಿ ನಿರ್ಮಿಸಲು ಉದ್ದೇಶಿಸಲಾಗಿದೆ. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ನಿವೇಶನವನ್ನು ಕಂದಾಯ ಇಲಾಖೆಗೆ ಹಸ್ತಾಂತರಿಸಲು ಮಂಜೂರಾತಿ ನೀಡಿರುತ್ತದೆ.

ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಕೊಡಗು ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ನಿರ್ಮಾಣ ಮಾಡಲು ರೂ. 12.50 ಕೋಟಿ ವೆಚ್ಚದ ಕಾಮಗಾರಿ ಸವಿವರ ಅಂದಾಜುಪಟ್ಟಿಯನ್ನು ಕರ್ನಾಟಕ ಗೃಹ ಮಂಡಳಿಯು ಮೇಲೆ (3) ಮತ್ತು (4)ರಲ್ಲಿ ಓದಲಾದ ತಮ್ಮ ಪತ್ರಗಳಲ್ಲಿ ಸಲ್ಲಿಸುತ್ತಾ, ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿದೆ.

ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ ಜಮೀನು ಕೇವಲ 2.20 ಎಕರೆ ವಿಸ್ತೀರ್ಣವಿರುವುದರಿಂದ ವಾಹನ ನಿಲುಗಡೆ ಸ್ಥಳಾವಕಾಶವನ್ನು ಕಟ್ಟಡದ ಸ್ಟಿಲ್ಟ್/ಬೇಸ್‌ಮೆಂಟ್ ಮಹಡಿಯಲ್ಲಿ ವ್ಯವಸ್ಥೆಯನ್ನು ಕಲ್ಪಿಸಬೇಕಾಗಿರುವುದರಿಂದ ಕಾಮಗಾರಿ ಅಂದಾಜು ವೆಚ್ಚದಲ್ಲಿ ರೂ. 3.50 ಕೋಟಿ ಹೆಚ್ಚುವರಿಯಾಗಿರುವುದನ್ನು ಸರ್ಕಾರವು ಮನಗಂಡಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕೊಡಗು ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ಮಡಿಕೇರಿಯ ಕರವಾಲೆಬಾಡಗಾ ಗ್ರಾಮದ 5.19 ಎಕರೆ ವಿಸ್ತೀರ್ಣದ ಜಮೀನಿಗೆ ಬದಲಾಗಿ ಕರ್ಣಂಗೇರಿ ಗ್ರಾಮದ ಸರ್ವೆ ನಂ.471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ನಿರ್ಮಿಸಲು ಮತ್ತು ಕಟ್ಟಡ ನಿರ್ಮಾಣ ಕಾಮಗಾರಿಯ ರೂ. 12.50 ಕೋಟಿಗಳ ಪರಿಷ್ಕೃತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಡಬ್ಲ್ಯೂಬಿಆರ್ 2008, ಬೆಂಗಳೂರು ದಿನಾಂಕ:08/11/2011.**

(1) ಕೊಡಗು ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ಕೊಡಗು ಜಿಲ್ಲಾ ಕೇಂದ್ರವಾದ ಮಡಿಕೇರಿಯ ಕರವಾಲೆಬಾಡಗಾ ಗ್ರಾಮದ 5.19 ಎಕರೆ ವಿಸ್ತೀರ್ಣದ ಜಮೀನಿಗೆ ಬದಲಾಗಿ ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ನಿರ್ಮಿಸಲು ಮಂಜೂರಾತಿಯನ್ನು ನೀಡಲಾಗಿದೆ.

(2) ಕರ್ಣಂಗೇರಿ ಗ್ರಾಮದ ಸರ್ವೆ ನಂ. 471/1ರ 2.20 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಕೊಡಗು ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ನಿರ್ಮಾಣ ಮಾಡುವ ಕಾಮಗಾರಿಯ ರೂ. 12.50 ಕೋಟಿ (ರೂಪಾಯಿ ಹನ್ನೆರಡು ಕೋಟಿ ಐವತ್ತು ಲಕ್ಷಗಳು ಮಾತ್ರ)ಗಳ ಪರಿಷ್ಕೃತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಕಾಮಗಾರಿ ಅಂದಾಜಿನಲ್ಲಿ ಬದಲಾವಣೆಯಾದ ಅಥವಾ ಹೆಚ್ಚುವರಿಯಾದ ಐಟಂಗಳಿಗೆ ಸಕ್ಷಮ ಪ್ರಾಧಿಕಾರದಿಂದ ಸರಿಯಾದ ತಾಂತ್ರಿಕ ಮಂಜೂರಾತಿಯನ್ನು ಪಡೆಯತಕ್ಕದ್ದು.

ಹೆಚ್ಚುವರಿಯನ್ನೊಳಗೊಂಡಂತೆ ಇದಕ್ಕೆ ತಗಲುವ ವೆಚ್ಚವನ್ನು 4059–80–051–0–42–386 (ಯೋಜನೆ) ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000 ಪ್ರಕಾರ ಮಾಡತಕ್ಕದ್ದು.

ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ಕಾಮಗಾರಿಯಲ್ಲಿ ಯಾವದೇ ಬದಲಾವಣೆ ಅಥವಾ ಹೆಚ್ಚುವರಿ ಐಟಂಗಳನ್ನು ಸೇರಿಸತಕ್ಕದ್ದಲ್ಲ.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 557 ವೆಚ್ಚ–7/2011, ದಿನಾಂಕ 19/09/2011ರ ಸಹಮತಿಯೊಂದಿಗೆ ಮತ್ತು ಪ್ರಕರಣ ಸಂಖ್ಯೆ ಸಿ:483/2011ರ, ದಿನಾಂಕ 18/10/2011ರ ಸಚಿವ ಸಂಪುಟದ ಅನುಮೋದನೆಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ. (ಭೂ ಸುಧಾರಣಾ ಕೋಶ).

ಪಿ.ಆರ್. ನಂ. 2865

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಶ್ರೀಧರ ಸುಭ್ರಾಯಚಾರ್, ಹಿಂದಿನ ತಹಶೀಲ್ದಾರ್, ಬಂಟ್ವಾಳ್ ತಾಲ್ಲೂಕು, ಶ್ರೀ ಕೆ. ರಘುಚಂದ್ರ ಆಚಾರ್, ಕಂದಾಯ ನಿರೀಕ್ಷಕರು, ಪಾಣೆ, ಮಂಗಳೂರು ಹೋಬಳಿ, ಬಂಟ್ವಾಳ್ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಲೋಕಾಯಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ** : ಉಪನಿಬಂಧಕರು/ಸಾರ್ವಜನಿಕ ಅಭಿಯೋಜಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಪತ್ರ ಸಂಖ್ಯೆ: D.O.No Compt/Uplok/Mys-755/2008/PR, ದಿನಾಂಕ: 09.06.2011

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದೊಂದಿಗೆ ಉಪ ನಿಬಂಧಕರು/ಸಾರ್ವಜನಿಕ ಅಭಿಯಂತರರು ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಬಂಟ್ವಾಳ ತಾಲ್ಲೂಕು ತಹಶೀಲ್ದಾರರಾದ ಶ್ರೀ ಶ್ರೀಧರ ಸುಭ್ರಾಯಚಾರ್ ಮತ್ತು ಶ್ರೀ ಕೆ. ರಘುಚಂದ್ರ ಆಚಾರ್, ಕಂದಾಯ ನಿರೀಕ್ಷಕರು, ಪಾಣೆ, ಮಂಗಳೂರು ಹೋಬಳಿ, ಬಂಟ್ವಾಳ್ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆಯನ್ನು ನಡಸಿ ಮಾನ್ಯ ಉಪ ಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ ವರದಿಯ ಬಗ್ಗೆ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಲಾಗಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ್ ತಾಲ್ಲೂಕಿನ ತಹಶೀಲ್ದಾರ್ ಕಛೇರಿಯ ಶ್ರೀ ಕೆ. ರಘುಚಂದ್ರ ಆಚಾರ್, ಕಂದಾಯ ನಿರೀಕ್ಷಕರು, ಪಾಣೆ, ಮಂಗಳೂರು ಹೋಬಳಿ, ಬಂಟ್ವಾಳ್ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ರವರುಗಳ ಟ್ರ್ಯಾಪ್ ಪ್ರಕರಣದಲ್ಲಿ ಲೋಕಾಯುಕ್ತ ಕಾಯ್ದೆ 1984 ರ ಕಲಂ 7(2) ರಂತೆ ಗೌರವಾನ್ವಿತ ಉಪಲೋಕಾಯುಕ್ತರವರು ವಿಚಾರಣೆ ನಡೆಸಲು ಅನುಕೂಲವಾಗುವಂತೆ ಈ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳ ಪ್ರತಿಗಳು ಮತ್ತು ತನಿಖಾಧಿಕಾರಿಯವರ ಅಂತಿಮ ವರದಿಯನ್ನು ಸಲ್ಲಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಅರ್ಜಿದಾರರಾದ ಶ್ರೀ ಪ್ರೇಮಾನಂದ. ಎನ್, ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ ಇವರು ಹಿಂದಿನ ತಹಶೀಲ್ದಾರರಾದ ಶ್ರೀ ಶ್ರೀಧರ ಸುಭ್ರಾಯಚಾರ್ ಹಾಗೂ ಶ್ರೀ ಕೆ. ರಘುಚಂದ್ರಾಚಾರ್, ಕಂದಾಯ ನಿರೀಕ್ಷಕರು, ಪಾಣೆ ಮಂಗಳೂರು ಇವರುಗಳ ವಿರುದ್ಧ ಮಾನ್ಯ ಲೋಕಾಯುಕ್ತರಿಗೆ ದೂರು ಸಲ್ಲಿಸಿರುತ್ತಾರೆ. ಸದರಿ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸಿಸಿಎ ನಿಯಮ 14–ಎ ರನ್ವಯ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತರಿಗೆ/ ಸಾರ್ವಜನಿಕ ಅಭಿಯೋಜಕರು ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಅಂತಹ ಕ್ರಮಗಳನ್ನು ಕೈಗೊಂಡ ಬಗ್ಗೆ ಸದರಿ ಕಾಯ್ದೆಯ 12(4) ರನ್ವಯ 3 ತಿಂಗಳೊಳಗಾಗಿ ಮಾನ್ಯ ಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಕೋರಿರುತ್ತಾರೆ.

ತನಿಖಾ ವರದಿಯಲ್ಲಿನ ಶಿಫಾರಸ್ಸನ್ನು ಪರಿಶೀಲಿಸಲಾಗಿ ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾದ ಶ್ರೀ ಶ್ರೀಧರ ಸುಭ್ರಾಯಚಾರ್, ಹಿಂದಿನ ತಹಶೀಲ್ದಾರ್, ಬಂಟ್ವಾಳ್ ತಾಲ್ಲೂಕು, ಶ್ರೀ ಕೆ. ರಘುಚಂದ್ರ ಆಚಾರ್, ಕಂದಾಯ ನಿರೀಕ್ಷಕರು, ಪಾಣೆ, ಮಂಗಳೂರು

ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 11 ಮತ್ತು 11–ಎ ರನ್ವಯ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿ ನಿಯಮ 14–ಎ ರಡಿಯಲ್ಲಿ ಮಾನ್ಯ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 82 ಎಡಿಇ 2006, ಬೆಂಗಳೂರು, ದಿನಾಂಕ: 04.11.2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಶ್ರೀಧರ ಸುಭ್ರಾಯಾಚಾರ್, ಹಿಂದಿನ ತಹಶೀಲ್ದಾರ್, ಹಾಗೂ ಶ್ರೀ ಕೆ. ರಘುಚಂದ್ರಆಚಾರ್, ಕಂದಾಯ ನಿರೀಕ್ಷಕರು, ಪಾಣೆ, ಮಂಗಳೂರು ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 11 ಮತ್ತು 11–ಎ ರನ್ವಯ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿಯ ನಿಯಮ 14–ಎರ ಅಡಿಯಲ್ಲಿ ವಿಚಾರಣೆ ಜರುಗಿಸಿ ಸರ್ಕಾರಕ್ಕೆ ವರದಿ ನೀಡಲು ಮಾನ್ಯ ಉಪ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೋಪಾಲಯ್ಯ**

ಪಿ.ಆರ್. ನಂ. 2866

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ. (ಸೇವೆಗಳು–3).

## ಕಂದಾಯ ಸಚಿವಾಲಯ

**ವಿಷಯ** : ಬೆಂಗಳೂರಿನ ಶಿವಾಜಿನಗರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ** : ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಮುಸರ 2009, ದಿನಾಂಕ: 25.02.2009

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು (ನಗರ) ಜಿಲ್ಲೆಯ ಶಿವಾಜಿನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1) | ಮಾನ್ಯ ವಿಧಾನಸಭಾ ಸದಸ್ಯರು, ಶಿವಾಜಿನಗರ ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2) | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ನಗರ ಜಿಲ್ಲೆ. | ಸದಸ್ಯರು |
| 3) | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ | ಸದಸ್ಯರು |
| 4) | ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುಸರ 2011: ಬೆಂಗಳೂರು, ದಿನಾಂಕ: 23ನೇ ನವೆಂಬರ್, 2011**

ಬೆಂಗಳೂರು (ನಗರ) ಜಿಲ್ಲೆಯ ಶಿವಾಜಿನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಆರ್. ಗುರುಮೂರ್ತಿ,<br>ನಂ. 10/1, ಶೇಷಾದ್ರಿ ರಸ್ತೆ, ಮಾರಪ್ಪ ಗಾರ್ಡನ್ ಬೆನ್‌ಸನ್ ಟೌನ್ ಅಂಚೆ, ಬೆಂಗಳೂರು–560046 | ಸಾಮಾನ್ಯ |
| 2 | ಶ್ರೀಮತಿ ಎಂ. ಚಿತ್ರಕಲಾವತಿ ನಂ.<br>10/1,ಯಲ್ಲಮ್ಮ ಕೋಯಿಲ್ ಸ್ಟ್ರೀಟ್, 2ನೇ ಅಡ್ಡರಸ್ತೆ,<br>ಬೆಂಗಳೂರು–560051 | ಮಹಿಳೆ |
| 3 | ಶ್ರೀ ಕೆ.ಸುನೀಲ್ ಕುಮಾರ್<br>ನಂ.68, 2ನೇ ಅಡ್ಡರಸ್ತೆ, ಬ್ರಾಡ್‌ವೇ ರಸ್ತೆ, ಶಿವಾಜಿನಗರ, ಬೆಂಗಳೂರು–560051 | ಪರಿಶಿಷ್ಟ ಜಾತಿ |
| 4 | ಶ್ರೀ ಸಿದ್ಧಿ ವಿನಾಯಕ<br>ನಂ. 58, 1ನೇ ಮಹಡಿ, ನ್ಯೂ ಮಾರ್ಕೆಟ್, ಶಿವಾಜಿನಗರ, ಬೆಂಗಳೂರು–560008 | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03.02.2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ: ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಪಿ.ಆರ್. ನಂ. 2867

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ. (ಮುಜರಾಯಿ).

## ಇಂಧನ ಸಚಿವಾಲಯ

**ವಿಷಯ :** ಮೆ॥ ಮದ್ರಾಸ್ ಹಾರ್ಡ್‌ಟೂಲ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ 0.5 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಂದ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** 1) ಸಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 1999 ದಿನಾಂಕ: 13.5.1999.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 259 ಎನ್‌ಸಿಇ 2004 ದಿನಾಂಕ: 18.3.2005.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 20.6.2009.

4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 04.3.2011.

5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 02.8.2011.

6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/MHPL-0.5AMTL/-2011/4107 ದಿನಾಂಕ: 13/19.10.2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ಅರಸಿನಗುಂಡಿ ಗಾಳಿವಲಯ ಪ್ರದೇಶದ ತುರುವನೂರು (4 ಮೆ.ವ್ಯಾ.) ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಒಟ್ಟು 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿವಲಯ ಪ್ರದೇಶಗಳಲ್ಲಿ ಹಂಚಿಕೆಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 17.25 ಮೆ.ವ್ಯಾ.ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ರವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆ ಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆ ಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆದು ಯೋಜನೆಯ ಅನುಷ್ಠಾನಕ್ಕಾಗಿ ಕೊನೆಯ ಅವಕಾಶವಾಗಿ ಕಾಲಾವಕಾಶವನ್ನು ದಿನಾಂಕ 31.12.2011ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ವಲಯ ಪ್ರದೇಶಗಳಲ್ಲಿ ಹಂಚಿಕೆಯಾಗಿರುವ 6.05 ಮೆ.ವ್ಯಾ. ಹೆಚ್ಚುವರಿ ಸಾಮರ್ಥ್ಯ (17.25 – 11.2 = 6.05 ಮೆ.ವ್ಯಾ.) ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 31.12.2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಲು ಅನುಮತಿಸಲಾದ 17.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.5 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ॥ ಮದ್ರಾಸ್ ಹಾರ್ಡ್‌ಟೂಲ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು, ಈ ಯೋಜನೆಯನ್ನು 31.12.2011ರೊಳಗೆ ಪೂರ್ಣಗೊಳಿಸಲಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ಪಿಪಿಎ ಮೂಲಕ ಎಸ್ಕಾಂಗೆ ಮಾರಾಟಮಾಡುವುದಾಗಿಯೂ ಸಹ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 417 ಎನ್‌ಸಿಇ 2011, ಬೆಂಗಳೂರು, ದಿನಾಂಕ 16–11–2011**

ಮೆ॥ ಅರುಲ್ ಮರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಕಂಪನಿಯವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಅರಸಿನಗುಂಡಿ ಗಾಳಿವಲಯ ಪ್ರದೇಶಗಳಲ್ಲಿ ಅನುಮತಿಸಲಾದ 17.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಮದ್ರಾಸ್ ಹಾರ್ಡ್‌ಟೂಲ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ.

| Village | Taluk | District | MW | Type of land | Land Survey Number | No. of WTGs | Extent in Land (Acres) |
|---|---|---|---|---|---|---|---|
| Turuvanur | Chitradurga | Chitradurga | 0.25 | Revenue | 339 | AMTL-6 | 0.56 |
| Turuvanur | Chitradurga | Chitradurga | 0.25 | Revenue | 339 | AMTL-7 | 0.56 |
| | | | **0.50** | | | | **1.12** |

1) ಮೆ॥ ಮದ್ರಾಸ್ ಹಾರ್ಡ್‌ಟೂಲ್ಸ್ ಪ್ರೈವೇಟ್ ಲಿಮಿಟೆಡ್ ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2) PPA is assined to BESCOM, BESCOM shall execute the PPA with M/s. Madras Private Limited within the period of one month.

3) ಸದರಿ ಕಂಪನಿಯ ಯೋಜನೆಯನ್ನು ದಿನಾಂಕ 31–12–2011ರೊಳಗಾಗಿ ಅನುಷ್ಠಾನಗೊಳಿಸುವುದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)

4) ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2868

## ಇಂಧನ ಸಚಿವಾಲಯ

**ವಿಷಯ :** M/s. Regen Powertech Private Limited ಇವರಿಗೆ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/RPPL-(6+7.5 MW)/Chikkaballapur /2011/586 ದಿನಾಂಕ 11.1.2011/11.2.2011 ಮತ್ತು ಕೆಆರ್ಇಡಿ/ 08/ RPPL-13.5 MW/2011/2576 ದಿನಾಂಕ: 29/30.8.2011.

2 ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. Regen Powertech Private Limited ಇವರಿಗೆ ಚಿಕ್ಕಬಳ್ಳಾಪುರ ಜಿಲ್ಲೆಯ, ಬಾಗೇಪಲ್ಲಿ ತಾಲ್ಲೂಕಿನ ನರಸಾಪುರ, ಬದ್ರಪಲ್ಲಿ, ಕೃಷ್ಣಪಿರ, ಪೆಸರ್‌ಪರ್ತಿ ಎಸ್‌ಎಫ್, ಮದಪಲ್ಲಿ, ಗುಂಡಲಪಲ್ಲಿ ಮತ್ತು ಕಮ್ಮವರಪಲ್ಲ, ಗೂರ್ತಿಪಲ್ಲಿ ಎಸ್‌ಎಫ್, ಸಾದೇಪಲ್ಲಿ, ಶ್ರೀರಾಮಪುರಂ, ದೋಣಕೊಂಡ, ಕೋಲಿಮ್‌ಪಲ್ಲಿ, ವಸಂತಪುರ ಎಸ್‌ಎಫ್ ಮತ್ತು ಗೊಂಡಮರಿಪಲ್ಲಿ ಪ್ರದೇಶಗಳಲ್ಲಿ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ನಡುವಳಿಯಲ್ಲಿ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. Regen Powertech Private Limited ಇವರಿಗೆ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 113 ಎನ್‌ಸಿಇ 2011, ಬೆಂಗಳೂರು, ದಿನಾಂಕ 05–12–2011**

M/s. Regen Powertech Private Limited ಇವರಿಗೆ ಚಿಕ್ಕಬಳ್ಳಾಪುರ ಜಿಲ್ಲೆಯ, ಬಾಗೇಪಲ್ಲಿ ತಾಲ್ಲೂಕಿನ ನರಸಾಪುರ, ಬದ್ರಪಲ್ಲಿ, ಕೃಷ್ಣಪಿರ, ಪೆಸರ್‌ಪರ್ತಿ ಎಸ್‌ಎಫ್, ಮದಪಲ್ಲಿ, ಗುಂಡಲಪಲ್ಲಿ ಮತ್ತು ಕಮ್ಮವರಪಲ್ಲ, ಗೂರ್ತಿಪಲ್ಲಿ ಎಸ್‌ಎಫ್, ಸಾದೇಪಲ್ಲಿ, ಶ್ರೀರಾಮಪುರಂ, ದೋಣಕೊಂಡ, ಕೋಲಿಮ್‌ಪಲ್ಲಿ, ವಸಂತಪುರ ಎಸ್‌ಎಫ್ ಮತ್ತು ಗೊಂಡಮರಿಪಲ್ಲಿ ಪ್ರದೇಶಗಳಲ್ಲಿ 10.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಘಟಕದ ಸ್ಥಾಪನೆಗೆ ಪ್ರಸ್ತಾವಿತ ಭೂಮಿಯು ಕಂದಾಯ ಮತ್ತು ಖಾಸಗಿ ಜಮೀನಿನ ಹಿನ್ನೆಲೆಯಲ್ಲಿ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ.

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| 1. | 57 G/13 | 13.5-3.0=10.5 MW (21 Nos. x 500 KW) | Part A: (7.5-1=6.5 MW) Narasapura, Badrapalli, Krishnapura, Pesarparti SF, Madapalli, Gundalapalli and Kammavarapalli villages of Bagepalli Taluk, Chikkaballapura District. | Two proposed area comprises of 2 Regions (1) as 5 sub parts and are identification of Area A, B, C, D & E. This area are independent hillocks and of non-contiguous. All these are havig open scrub featur and covered with Boulders and Rocky knobs. The individual areas are held in the following Geographical Co-ordinates:<br>Area A:1.00 MW<br>Latitude: 13º45'31'- 13"47'39" N<br>Longitude: 77º 48'28"-77º49'29"E<br>Ridge peaks: 782 Amsl.<br>Area-B: 1.5 MW<br>Latitude: 13º45'30"-13º46'29"N<br>Longitude: 77º 51'33"-77º52'29"E |

| | | | | |
|---|---|---|---|---|
| | | | Part-B: (6-2=4 MW)<br>Gortipalli SF, Sadepalli, Srirampuram, Donnakonda, Kolimpalli, Vasanthapura SF and Bairannagaripalli villages. | Area-C: 1.00 MW<br>Latitude: 13º48'15"-13º50'24"N<br>Longitude: 77º 51'8"-77º 52'28"E<br>Ridge peaks: 887, 894 Amsl.<br><br>Area D: 1.5 MW<br>Latitude: 13º51'22"-13º53'10"N<br>Longitude: 77º 51'18"-77º 53'29"E<br>Ridge peaks: 857, 861, 818 Amsl.<br><br>Area E: 1.5 MW<br>Latitude: 13º54'1"-13º55'20" N<br>Longitude: 77º 50'51"-77º 52'6" E<br>Ridge peaks: 848 Amsl.<br><br>The proposed area comprises of 2 Regions of (2) as 4 sub parts and are identification of Area P.Q.R & S. This area are independent hillocks and of non-contiguous. All these are having open scrup feature and covered with Boulders and Rocky knobs and Sheet Rocks, The Individual areas are held in the following Geographical co-ordinates. |
| | | | | Area P: 1.00 MW<br>Latitude: 13º45'26"-13º47'12"N<br>Longitude: 77º 55'54"-77º57'21"E<br>Ridge peaks: 836 Amsl.<br><br>Area Q : 1.00 MW<br>Latitude: 13º48'15"-13º49'11"N<br>Longitude: 77º 55'41"-77º58'19"E<br>Ridge peaks: 837, 834 Amsl.<br><br>Area R: 1.5 MW<br>Latitude: 13º52'36"-13º53'36"N<br>Longitude: 77º 55'13"-77º 56'23"E<br>Ridge peaks: 755 Amsl.<br><br>Area S: 1.00 MW<br>Latitude: 13º53'34"-13º54'45" N<br>Longitude: 77º 57'19"-77º 58'33" E<br>Ridge peaks: 836 Amsl |
| | | 10.5 MW | | |

1. ಈ ಯೋಜನೆಯನ್ನು 3 ವರ್ಷದ ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು. (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿ ಸಲ್ಲಿಸತಕ್ಕದ್ದು)
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ

ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಈ ಜಮೀನಿನ ಮಾಲೀಕರಿಂದ ಒಪ್ಪಿಗೆ/ಒಡಂಬಡಿಕೆಯನ್ನು ಪಡೆಯತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗುವುದು.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2728

## ಇಂಧನ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ ಇಎನ್ 328 ಎನ್‌ಸಿಇ 2011, ಬೆಂಗಳೂರು, ದಿನಾಂಕ : 16–11–2011.**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 328 ಎನ್‌ಸಿಇ 2011 ದಿನಾಂಕ: 15.9.2011 ರಲ್ಲಿ ಮೆ॥ KSK Wind Power Aminabhavi Chikkodi Private Limited ಇವರಿಗೆ 15 ಮೆ.ವ್ಯಾ. ಪವನ ವಿದ್ಯುತ್ ಯೋಜನೆ ಸಾಮರ್ಥ್ಯದ ವರ್ಗಾವಣೆ ಆದೇಶದ ಕಂಡಿಕೆ 3ರಲ್ಲಿ ಆರ್ಥಿಕ ವರ್ಷ

**2013–14**

ಎಂಬುದರ ಬದಲಾಗಿ

**2012–13**

ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2741

## ಇಂಧನ ಸಚಿವಾಲಯ

**ವಿಷಯ :** ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 1.25 ಮೆಗಾ ವ್ಯಾಟ್ ಸಾಮರ್ಥ್ಯದ ಗಂಗನಹಾಳ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 298 ಎನ್‌ಸಿಇ 2004, ದಿನಾಂಕ : 13-09-2004.
2) ಸರ್ಕಾರಿ ಆದೇಶ ಸಂಖ್ಯೆ : ಇಂಇ 298 ಎನ್‌ಸಿಇ 2004, ದಿನಾಂಕ 20-12-2004.
3) ಸರ್ಕಾರಿ ಆದೇಶ ಸಂಖ್ಯೆ : ಇಂಇ 430 ಎನ್‌ಸಿಇ 2007, ದಿನಾಂಕ 10-12-2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/SH-169/2011/1918, ದಿನಾಂಕ 30-6-2011 / 2-7-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ಗಂಗನಹಾಳ ಗ್ರಾಮ ಶಹಾಪುರ ಬ್ರ್ಯಾಂಚ್ ಕೆನಾಲ್‌ನ ಡಿಸ್ಟ್ರಿಬ್ಯುಟರಿ-7 ಕ್ಕೆ ಅಡ್ಡಲಾಗಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಹಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಹಾಳ ಕಿರು ಜಲ ವಿದ್ಯುತ್ ಯೋಜನೆಯನ್ನು 1.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಗಂಗನಹಾಳ ಗ್ರಾಮ ಶಹಾಪುರ ಬ್ರ್ಯಾಂಚ್ ಕೆನಾಲ್‌ನ ಡಿಸ್ಟ್ರಿಬ್ಯುಟರಿ-7 ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾಗಿದ್ದ 1.25 ಮೆಗಾ ವ್ಯಾಟ್ ಸಾಮರ್ಥ್ಯದ ಗಂಗನಹಾಳ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವನ್ನು 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಅಭಿವೃದ್ಧಿದಾರರು ಈ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತಿದ್ದು, ಭೂ ಮಾಲೀಕರೊಡನೆ ಒಪ್ಪಂದ ಮಾಡಿಕೊಂಡಿದ್ದಾರೆ. ಡಿಸೆಂಬರ್ 2011 ರೊಳಗೆ ಅನುಷ್ಠಾನಗೊಳಿಸುವುದಾಗಿ ತಿಳಿಸಿದ್ದನ್ನು ಪರಿಶೀಲಿಸಿ ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 8 ತಿಂಗಳ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿದ್ದಾರೆ.

ಮೇಲಿನ ಶಿಫಾರಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 293 ಎನ್‌ಸಿಇ 2011, ಬೆಂಗಳೂರು, ದಿನಾಂಕ: 16-11-2011**

ಸರ್ಕಾರವು ಮೆ॥ ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲೂಕಿನ ಗಂಗನಹಾಳ ಗ್ರಾಮ ಶಹಾಪುರ ಬ್ರ್ಯಾಂಚ್ ಕೆನಾಲ್‌ನ ಡಿಸ್ಟ್ರಿಬ್ಯುಟರಿ-7 ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ **2.00 ಮೆಗಾ ವ್ಯಾಟ್** ಸಾಮರ್ಥ್ಯದ ಗಂಗನಹಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು **ದಿನಾಂಕ 31-12-2011 ರವರೆಗೆ** ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿಆರ್.ನಂ. 01

## ಇಂಧನ ಸಚಿವಾಲಯ

**ವಿಷಯ :** ಮೆ॥ ಕೆಪಿಆರ್ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲ್ಲೂಕಿನ, ಅಲ್ಮೆಲ್ ಗ್ರಾಮದಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಯೋಜನಾ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**
1) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆದೇಶ ಸಂಖ್ಯೆ ವಾಕೈ 136 ಎಸ್‌ಜಿಎಫ್ ದಿನಾಂಕ 23-12-2006.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/04/KPR-SPL/2009/2682, ದಿನಾಂಕ 03/09-9-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಕೆಪಿಆರ್ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲ್ಲೂಕಿನ, ಅಲಮೇಲ್ ಗ್ರಾಮದಲ್ಲಿ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಅನುಮೋದನೆ ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಕೆಪಿಆರ್ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲ್ಲೂಕಿನ, ಅಲ್ಮೆಲ್ ಗ್ರಾಮದಲ್ಲಿ 30 ಮೆ.ವ್ಯಾ. (ಗ್ರಾಸ್) ಜೊತೆಗೆ 18.36 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) during season ಹಾಗೂ 26.7 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) during off season ಸಾಮರ್ಥ್ಯವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 366 ಎನ್‌ಸಿಇ 2011, ಬೆಂಗಳೂರು, ದಿನಾಂಕ: 15-11-2011**

ಮೆ॥ ಕೆಪಿಆರ್ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲ್ಲೂಕಿನ, ಅಲ್ಮೆಲ್ ಗ್ರಾಮದಲ್ಲಿ 30 ಮೆ.ವ್ಯಾ. (ಗ್ರಾಸ್) ಜೊತೆಗೆ 18.36 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) during season ಹಾಗೂ 26.7 ಮೆ.ವ್ಯಾ (ಎಕ್ಸ್‌ಪೋರ್ಟೆಬಲ್) during off season ಹಾಗೂ 26.7 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು **"ನಿರಾಕ್ಷೇಪಣೆಯನ್ನು"** ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into power purchase agreement for selling of power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/Organizations such as Forest, Department, Revenue Department, & Karnataka State Pollution Control Board, etc. for the Power Plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.
5. The company shall complete the project before December 2012.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿಆರ್.ನಂ. 02

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ರೇಣುಕ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ, ಅಥಣಿ ತಾಲ್ಲೂಕಿನ, ಬುರ್ಲಟ್ಟಿ ಗ್ರಾಮದಲ್ಲಿ ಸ್ಥಾಪಿಸಲು ಅನುಮತಿಸಲಾಗಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಯೋಜನಾ ಘಟಕದ ಸಾಮರ್ಥ್ಯವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಪತ್ರ ಸಂಖ್ಯೆ : ಡಿಇ 91 ಎನ್‌ಸಿಇ 2000, ದಿನಾಂಕ : 10-07-2000.
2) ಸರ್ಕಾರಿ ಆದೇಶ ಸಂಖ್ಯೆ : ಇಎನ್ 135 ಎನ್‌ಸಿಇ 2006, ದಿನಾಂಕ 22-04-2006.
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 393 ಎನ್‌ಸಿಇ 2007, ದಿನಾಂಕ 11-12-2007 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಇಎನ್ 35 ಎನ್‌ಸಿಇ 2008, ದಿನಾಂಕ 16-2-2008.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/04/ಎಸ್‌ಆರ್‌ಎಸ್‌ಎಲ್-ಬುರ್ಲಟ್ಟಿ-ಬಿಇಎಲ್/2009/2673, ದಿನಾಂಕ : 07/09-9-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ॥ ಹರಿ ಪ್ರಿಯ ಶುಗರ್ಸ್ ವರ್ಕ್ಸ್ ಲಿಮಿಟೆಡ್ ಇವರಿಗೆ 25 ಮೆಗಾ ವ್ಯಾಟ್ ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ ವಿದ್ಯುತ್ ಘಟಕವನ್ನು ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ, ಬುರ್ಲಟ್ಟಿ, ಕೊತನೂರ್ ಹೋಬ್ಳಿ ಇಲ್ಲಿ ಸ್ಥಾಪಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಹರಿ ಪ್ರಿಯ ಶುಗರ್ಸ್ ವರ್ಕ್ಸ್ ಲಿಮಿಟೆಡ್ ಇವರಿಗೆ ಹಂಚಿಕೆಯಾಗಿದ್ದು ಮೇಲ್ಕಂಡ 25 ಮೆಗಾ ವ್ಯಾಟ್ ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ ವಿದ್ಯುತ್ ಯೋಜನೆಯನ್ನು ಮೆ॥ ರೇಣುಕ ಶುಗರ್ಸ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 11-12-2007ರ ಆದೇಶದಲ್ಲಿ ಮೆ॥ ರೇಣುಕ ಶುಗರ್ಸ್ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ, ಬುರ್ಲಟ್ಟಿ, ಕೊತನೂರ್ ಹೋಬ್ಳಿ ಇಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ ವಿದ್ಯುತ್ ಘಟಕದ ಸಾಮರ್ಥ್ಯವನ್ನು 25 ಮೆಗಾ ವ್ಯಾಟ್ ನಿಂದ 38 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು. ತದನಂತರ, ದಿನಾಂಕ 16-2-2008ರ ತಿದ್ದುಪಡಿಯಲ್ಲಿ ದಿನಾಂಕ 11-12-2007ರ ಆದೇಶದಲ್ಲಿ 38 ಮೆಗಾ ವ್ಯಾಟ್ ಎಂದಿರುವುದನ್ನು 38 ಮೆಗಾ ವ್ಯಾಟ್ (ಗ್ರಾಸ್) ಮತ್ತು 25.76 (ಎಕ್ಸ್‌ಪೋರ್ಟೆಬಲ್) ಎಂದು ತಿದ್ದುಪಡಿ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ರೇಣುಕ ಶುಗರ್ಸ್ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ, ಬುರ್ಲಟ್ಟಿ, ಕೊತನೂರ್ ಹೋಬ್ಳಿ ಇಲ್ಲಿ ಕಬ್ಬಿನ ಸಿಪ್ಪೆ ಆಧಾರಿತ ಸಹ-ವಿದ್ಯುತ್ ಘಟಕದ ಸಾಮರ್ಥ್ಯವನ್ನು ಪ್ರಸ್ತುತ ಇರುವ 38 ಮೆಗಾ ವ್ಯಾಟ್ (ಗ್ರಾಸ್) ಮತ್ತು 25.76 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯವನ್ನು 68 ಮೆಗಾ ವ್ಯಾಟ್ (ಗ್ರಾಸ್) ಮತ್ತು 47.53 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 364 ಎನ್‌ಸಿಇ 2011, ಬೆಂಗಳೂರು, ದಿನಾಂಕ: 15–11–2011**

ಮೆ॥ ಶ್ರೀ ರೇಣುಕ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ, ಬುರ್ಲಟ್ಟಿ, ಕೊತನೂರ್ ಹೋಬ್ಳಿ ಇಲ್ಲಿ ಸ್ಥಾಪಿಸಲು ಅನುಮತಿಸಲಾಗಿರುವ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು ಮಂಜೂರಾಗಿರುವ 38 ಮೆಗಾ ವ್ಯಾಟ್ (ಗ್ರಾಸ್) ಮತ್ತು 25.76 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯವನ್ನು 68 ಮೆಗಾ ವ್ಯಾಟ್ (ಗ್ರಾಸ್) ಮತ್ತು 47.53 ಮೆಗಾ ವ್ಯಾಟ್ (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿಆರ್.ನಂ. 03

## ಇಂಧನ ಸಚಿವಾಲಯ

**ವಿಷಯ :** ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಬೆಂಗಳೂರು ಇವರು ಟ್ರ್ಯಾಪ್ ಪ್ರಕರಣದಲ್ಲಿ ಲೋಕಾಯುಕ್ತರ ಬಲೆಗೆ ಸಿಕ್ಕಿಬಿದಿದ್ದು, ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :**

1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ. 52/2011, ದಿನಾಂಕ : 28–10–2011.

2) ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ : ಮುವಿಪ/ಸಿಸ1/ಕಲೋಆ/22146/ 11–12, ದಿನಾಂಕ 31–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ:–

1. ಶ್ರೀ ಶರಣಪ್ಪ, ವಿದ್ಯುತ್ ಗುತ್ತಿಗೆದಾರರು, ವಾಜರಹಳ್ಳಿ, ಕನಕಪುರ ರಸ್ತೆ, ಬೆಂಗಳೂರು (ಫಿರ್ಯಾದುದಾರರಾದ) ಇವರು ಶ್ರೀ ಸಿದ್ಧಗಂಗ ಎಲೆಕ್ಟ್ರಿಕಲ್ ಎಂಟರ್‌ಪ್ರೈಸಸ್ ಎಂಬ ಹೆಸರಿನಲ್ಲಿ ವಿದ್ಯುತ್ ಗುತ್ತಿಗೆ ಪರವಾನಿಗೆಯನ್ನು ಹೊಂದಿದ್ದು, ಅವರ ಪರಿಚಯಸ್ಥ ಶ್ರೀ ಹೆಚ್.ಆರ್. ಮಧುಸೂದನ್ ರೆಡ್ಡಿ ಎಂಬುವವರ ಕಾರ್ಖಾನೆ ಶೆಡ್‌ಗೆ ವಿದ್ಯುತ್ ಸಂಪರ್ಕ ಪಡೆಯಲು ಕಾರ್ಯನಿರ್ವಾಹಕ ಅಭಿಯಂತರರು, ಬೆಂಗಳೂರು ವಿದ್ಯುಚ್ಛಕ್ತಿ ಮಂಡಳಿ, ಚಂದಾಪುರ ಇಲ್ಲಿಗೆ ಅರ್ಜಿ ಸಲ್ಲಿಸಿ ಮಂಜೂರಾತಿ ಪಡೆದಿದ್ದು, ಈ ಸಂಬಂಧ ವಿದ್ಯುತ್ ಸರಬರಾಜು ತೆಗೆದುಕೊಳ್ಳುವ ಮುನ್ನ ವಿದ್ಯುತ್ ಪರಿವೀಕ್ಷಕರವರಿಂದ ವಿದ್ಯುತ್ ಕಾಮಗಾರಿಯ ಬಗ್ಗೆ ದೃಢೀಕರಣ ಪಡೆದುಕೊಳ್ಳುವುದು ಅವಶ್ಯಕವಾಗಿದ್ದು, ಈ ಹಿನ್ನೆಲೆಯಲ್ಲಿ ಫಿರ್ಯಾದುದಾರರು ಒಂದು ಟ್ರಾನ್ಸ್‌ಫಾರ್ಮರ್ ಸಬ್ ಸ್ಟೇಷನ್ ನೀಲಿ ನಕ್ಷೆಯನ್ನು ತಯಾರಿಸಿ, ಅದರ ಮಂಜೂರಾತಿಗಾಗಿ ಅರ್ಜಿಯನ್ನು ನಿಗದಿತ ಶುಲ್ಕ ಮತ್ತು ದಾಖಲಾತಿಗಳೊಂದಿಗೆ ಉಪ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ದಕ್ಷಿಣ ರವರಿಗೆ ಸಲ್ಲಿಸಿ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರನ್ನು ಭೇಟಿ ಮಾಡಿ ವಿಚಾರಿಸಿದಾಗ, ಆರೋಪಿ ಶ್ರೀ ಜಿ. ಗಿರೀಶ್ ರವರು ಫಿರ್ಯಾದುದಾರರು ಮಾಡಿದ ವಿದ್ಯುತ್ ಕಾಮಗಾರಿಯನ್ನು ಪರಿವೀಕ್ಷಿಸಿ, ವರದಿಗೆ ಸಹಿ ಮಾಡಿ, ಮೇಲಾಧಿಕಾರಿಗಳಿಗೆ ಕಡತವನ್ನು ಕಳುಹಿಕೊಡಲು ಲಂಚದ ಹಣ ರೂ. 10,000/– ಗಳಿಗೆ ಒತ್ತಾಯಿಸಿದ್ದು ಫಿರ್ಯಾದುದಾರರು ಆರೋಪಿತರು ಒತ್ತಾಯಿಸಿದ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲದ ಕಾರಣ ದಿನಾಂಕ 22–10–2011 ರಂದು ಕರ್ನಾಟಕ ಲೋಕಾಯುಕ್ತ ರವರಿಗೆ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ದಕ್ಷಿಣ, ಇವರ ವಿರುದ್ಧ ಕಾನೂನು ರೀತ್ಯ ಕ್ರಮವನ್ನು ಕೈಗೊಳ್ಳಬೇಕೆಂದು ಕೋರಿ ದೂರನ್ನು ನೀಡಿರುವುದಾಗಿ ತಿಳಿಸಿರುತ್ತಾರೆ.
2. ಅದರಂತೆ ಶ್ರೀ ವಿ. ಅನಿಲ್ ಕುಮಾರ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ರವರು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 7, 13 (1) (ಡಿ) ಸಹವಾಚನ ಕಲಂ 13 (2)ರ ರೀತ್ಯ ದಿನಾಂಕ 22–10–2011 ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ : 52/2011 ರಡಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡು, ನಂತರ ಪಂಚಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ 24–10–2011 ರಂದು ಬೀಸಿದ ಬಲೆಯಲ್ಲಿ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ದಕ್ಷಿಣ–1, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬುಲ್ ಟೆಂಪಲ್ ರಸ್ತೆ, ಬೆಂಗಳೂರು ರವರು ಫಿರ್ಯಾದುದಾರರಿಂದ ಸನ್ನೆ ಮೂಲಕ ಕೇಳಿ ರೂ. 10,000/– ಗಳನ್ನು ಸ್ವೀಕರಿಸುವಾಗ ಸಿಕ್ಕಿಬಿದ್ದಿದ್ದು ಆರೋಪಿಯಾದ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬುಲ್ ಟೆಂಪಲ್ ರಸ್ತೆ, ಬಸವನಗುಡಿ, ಬೆಂಗಳೂರು ಇವರ ಎರಡೂ ಕೈಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ಮಿಶ್ರಣದ ದ್ರಾವಣದಲ್ಲಿ ಪ್ರತ್ಯೇಕವಾಗಿ ಅದ್ದಿಸಿ ತೊಳೆಸಿದಾಗ, ಬಣ್ಣ ರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಯಿಸಿರುತ್ತವೆ. ಇದರಿಂದ ಲಂಚದ ಹಣವನ್ನು ಸ್ವೀಕರಿಸಿರುವುದು ದೃಢಪಟ್ಟಿರುತ್ತದೆ. ಅದರಂತೆ ದಿನಾಂಕ 24–10–2011 ರಂದು ಆರೋಪಿತರನ್ನು ದಸ್ತಗಿರಿ ಮಾಡಿ

ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದು ನ್ಯಾಯಾಧೀಶರ ಆದೇಶದಂತೆ ಆರೋಪಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುವುದಾಗಿ ವರದಿ ಮಾಡಿರುತ್ತಾರೆ.

3. ಫಿರ್ಯಾದುದಾರರಿಂದ ಲಂಚನ ಹಣವನ್ನು ಕೇಳಿ ಪಡೆದ ಬಗ್ಗೆ ಫೀರ್ಯಾದು ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಆರೋಪಿಯಾದ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು ಇವರ ಮೇಲಿನ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆದಲ್ಲಿ ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗು ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ತಕ್ಷಣದಿಂದ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸುವಂತೆಯೂ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ದಿನಾಂಕ 24-10-2011 ರಂದು ಸಂಜೆ 6-30 ಗಂಟೆಗೆ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ರವರು ಲಂಚ ನಿರೋಧ ಕಾಯ್ದೆ-1988ರ ಕಲಂ 7, 13 (1) (ಡಿ) ಸಹವಾಚನ 13(2) ರನ್ವಯ ದಿನಾಂಕ 22-10-2011 ರಂದು ಲೋಕಾಯುಕ್ತ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ : 52/2011 ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ದಸ್ತಗಿರಿ ಮಾಡಿರುವುದಾಗಿ ತಿಳಿಸಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯು ದಿನಾಂಕ 24-10-2011 ರಂದು ರೂ. 10,000/-ಗಳ ಲಂಚದ ಹಣವನ್ನು ಸ್ವೀಕರಿಸುತ್ತಿರುವಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದಿರುವುದರಿಂದ ಹಾಗೂ ಅವರ ಎರಡೂ ಕೈಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿಸಿ ತೊಳೆಸಿದಾಗ ಬಣ್ಣ ಬದಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಬೆಂಗಳೂರು ಇವರು ಅಲ್ಲಿಯೇ ಮುಂದುವರೆದಲ್ಲಿ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಪಡಿಸುವ ಸಾಧ್ಯತೆಗಳು ಇರುವುದರಿಂದ ಅಧಿಕಾರಿಯವರ ವಿರುದ್ಧದ ಮುಂದಿನ ತನಿಖೆ/ವಿಚಾರಣೆಯನ್ನು ಬಾಕಿ ಇಟ್ಟು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 116 ಇಬಿಎಸ್ 2011, ಬೆಂಗಳೂರು, ದಿನಾಂಕ: 21-11-2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಬೆಂಗಳೂರು ಇವರ ವಿರುದ್ಧ ವಿಚಾರಣೆ ಬಾಕಿ ಇಟ್ಟು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1)ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಜಿ. ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಛೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಬೆಂಗಳೂರು ಇವರು ಅಮಾನತ್ತಿನಲ್ಲಿರುವ ಅವಧಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ ಈ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಕಾರ್ಯ ಸ್ಥಾನವನ್ನು ಬಿಡತಕ್ಕದ್ದಲ್ಲ ಎಂದು ಸರ್ಕಾರವು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ,**

ಪೀಠಾಧಿಕಾರಿ,

ಇಂಧನ ಇಲಾಖೆ

ಪಿಆರ್.ನಂ. 04

## ಇಂಧನ ಸಚಿವಾಲಯ

**ವಿಷಯ :** ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 3 ಡಿಎಸ್‌ವೈ 2011, ದಿನಾಂಕ : 03-05-2011.
2) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 3 ಡಿಎಸ್‌ವೈ 2011, ದಿನಾಂಕ : 18-08-2011.
3) ಸರ್ಕಾರಿ ಪತ್ರ ಸಂಖ್ಯೆ : ಇಎನ್ 04 ಸಮನ್ವಯ 2011, ದಿನಾಂಕ 01-10-2011.
4) ಸರ್ಕಾರಿ ಪತ್ರ ಸಂಖ್ಯೆ : ಇಎನ್ 04 ಸಮನ್ವಯ 2011, ದಿನಾಂಕ 02-11-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆದೇಶದಲ್ಲಿ ಸಚಿವಾಲಯದಲ್ಲಿ ವಿವಿಧ ಇಲಾಖೆಗಳಿಗೆ ಬೇಕಾಗುವ ಲೇಖನ ಸಾಮಗ್ರಿಗಳನ್ನು ಮತ್ತು ಇನ್ನಿತರ ಬಳಕೆ ಪದಾರ್ಥಗಳನ್ನು ಖರೀದಿಸುವ ಅಧಿಕಾರವನ್ನು ಆಯಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ವಹಿಸಲಾಗಿದೆ ಮತ್ತು ಈ ಆದೇಶದಲ್ಲಿ ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸಲು ಲೆಕ್ಕ ಶೀರ್ಷಿಕೆ 2052-00-090-0-01-051 (ಸಾಮಾನ್ಯ ವೆಚ್ಚ) ರಲ್ಲಿ ರೂ.30,000/- (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಒದಗಿಸಿದ್ದು ಇದರಲ್ಲಿ ರೂ.28,033/- ಗಳು ಲೇಖನ ಸಾಮಗ್ರಿಗಳಿಗೆ ವೆಚ್ಚವಾಗಿದ್ದು, ಉಳಿದ ರೂ. 1,967/-ಗಳು ಉಳಿದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಇಂಧನ ಇಲಾಖೆಗೆ ಮತ್ತೆ ಲೇಖನ ಸಾಮಗ್ರಿಗಳನ್ನು ಮೇಲ್ಕಂಡ ಲೆಕ್ಕ ಶೀರ್ಷಿಕೆಯಡಿ ರೂ. 55,000/-ಗಳನ್ನು ಒದಗಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ದರಪಟ್ಟಿಗಳನ್ನು ಸಲ್ಲಿಸುವಂತೆ ಸಂಸ್ಥೆಗಳಿಗೆ ಕೋರಲಾಗಿತ್ತು. ಅದರಂತೆ ಮೆ॥ ಸನ್‌ರೇಸ್ ಇಂಪ್ರೆಷನ್, ನಂ.14 & 15, ನಾರ್ತ್ ಬ್ಲಾಕ್, ಮಣಿಪಾಲ್ ಸೆಂಟರ್, ಡಿಕೆಂಸನ್ ರಸ್ತೆ, ಬೆಂಗಳೂರು-560042, ಮೆ॥ ಹೈಟೆಕ್ ಸ್ಟೇಷನರೀಸ್, ಇಬ್ರಾಹಿಂ ಸಾಹೇಬ್ ರಸ್ತೆ, ಶಿವಾಜಿನಗರ, ಬೆಂಗಳೂರು. ಮೆ॥ ಪ್ಯಾರಾಮೌಂಟ್ ಸ್ಟೇಷನರೀಸ್, ಪ್ಲಾಟ್ ನಂ. ಗಿ-4, ಕೆಎಸ್‌ಎಸ್ಐಡಿಸಿ, ಕಾಂಪೌಂಡ್, ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು. ಇವರು ದರಪಟ್ಟಿಯನ್ನು ಸಲ್ಲಿಸಿರುತ್ತಾರೆ. ಈ ಮೂರು ಸಂಸ್ಥೆಗಳ ದರಪಟ್ಟಿಯನ್ನು ಪರಿಶೀಲಿಸಿದಾಗ ಮೆ॥ ಸನ್‌ರೇಸ್ ಇಂಪ್ರೆಷನ್ ಇವರು ಸಲ್ಲಿಸಿರುವ ಬೆಲೆಗಳ ದರಪಟ್ಟಿ ಕಡಿಮೆ ಇರುತ್ತದೆ. ಆದುದರಿಂದ ಮೆ॥ ಸನ್‌ರೇಸ್ ಇಂಪ್ರೆಷನ್, ಇವರಿಂದ ಲೇಖನ ಸಾಮಗ್ರಿಗಳನ್ನು ಪಡೆಯಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವಂತೆ ಮೆ॥ ಸನ್‌ರೇಸ್ ಇಂಪ್ರೆಷನ್, ಇವರನ್ನು ಕೋರಲಾಗಿತ್ತು, ಅದರಂತೆ, ಮೆ॥ ಸನ್‌ರೇಸ್ ಇಂಪ್ರೆಷನ್, ಇವರು ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿ ಇದಕ್ಕೆ ಸಂಬಂಧಿಸಿದ ವೆಚ್ಚ ಬಾಬ್ತು ರೂ. 56,798/- (ಐವತ್ತಾರು ಸಾವಿರದ ಏಳುನೂರ ತೊಂಬತ್ತ ಎಂಟು ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಸಂದಾಯ ಮಾಡುವಂತೆ ಬಿಲ್ಲನ್ನು ದಿನಾಂಕ 15-10-2011 ರಂದು ಸಲ್ಲಿಸಿರುತ್ತಾರೆ. ಆದುದರಿಂದ ಮೆ॥ ಸನ್‌ರೇಸ್ ಇಂಪ್ರೆಷನ್, ಇವರಿಗೆ ಬಿಲ್ಲಿನ ಹಣವನ್ನು ಸಂದಾಯ ಮಾಡಲು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 04 ಸಮನ್ವಯ 2011, ಬೆಂಗಳೂರು, ದಿನಾಂಕ: 03-12-2011**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವ ಸಂಬಂಧ ಬಿಲ್ಲಿನ ಮೊತ್ತ ವೆಚ್ಚ ರೂ. 55,853/- (ಐವತ್ತೈದು ಸಾವಿರದ ಎಂಟುನೂರ ಐವತ್ತ ಮೂರು ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಮೆ॥ ಸನ್‌ರೇಸ್ ಇಂಪ್ರೆಷನ್, ನಂ.14 & 15, ನಾರ್ತ್ ಬ್ಲಾಕ್, ಮಣಿಪಾಲ್ ಸೆಂಟರ್, ಡಿಕೆಂಸನ್ ರಸ್ತೆ, ಬೆಂಗಳೂರು-560042. ಇವರಿಗೆ ಸಂದಾಯ ಮಾಡಲು ಮಂಜೂರಾತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2052-00-090-0-01-051 (ಸಾಮಾನ್ಯ ವೆಚ್ಚ) (ಯೋಜನೇತರ)" ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10-07-1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿಆರ್.ನಂ. 05

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್ 9.0 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣೆ ಕುರಿತು.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಇಎನ್ 133 ಎನ್‌ಸಿಇ 1997 (4), ದಿನಾಂಕ : 20-04-1998.
2) ಸರ್ಕಾರಿ ಆದೇಶ ಸಂಖ್ಯೆ : ಇಎನ್ 190 ಎನ್‌ಸಿಇ 2006, ದಿನಾಂಕ 25-07-2006.
3) ಸರ್ಕಾರಿ ಆದೇಶ ಸಂಖ್ಯೆ : ಇಎನ್ 457 ಎನ್‌ಸಿಇ 2008, ದಿನಾಂಕ 16-09-2009.
4) ಸರ್ಕಾರಿ ಆದೇಶ ಸಂಖ್ಯೆ : ಇಎನ್ 371 ಎನ್‌ಸಿಇ 2010, ದಿನಾಂಕ 10-01-2011.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/IWEL-9/MW/2011/2204, ದಿನಾಂಕ : 20/25-7-2011.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/IWEL-9/MW/2011/2713, ದಿನಾಂಕ : 12/13-9-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ Devlina power private Limited ರವರಿಗೆ ಚಿತ್ರದುರ್ಗ ಜಿಲ್ಲೆಯ ಪಲವನಹಳ್ಳಿ, ಜೋಗಿಮಠ ವಲಯ ಎಂಬಲ್ಲಿ 8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 8 ಮೆ.ವ್ಯಾ. ನಿಂದ 9 ಮೆ.ವ್ಯಾ.ಗೆ ಹೆಚ್ಚಿಸಿ ಸದರಿ ಯೋಜನೆಯನ್ನು ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್‌ರವರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಯೋಜನೆಯ ಹಂಚಿಕೆ ಆದೇಶದ ರದ್ದತಿಯನ್ನು ಹಿಂಪಡೆದು, ಯೋಜನೆಯನ್ನು ದಿನಾಂಕ 31-03-2011 ರೊಳಗಾಗಿ ಪ್ರಾರಂಭ ಮಾಡಬೇಕೆಂಬ ಷರತ್ತಿಗೊಳಪಟ್ಟ ಪೂರ್ವಸ್ಥಿತಿಗೆ ತರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ಮತ್ತು (6) ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್‌ರವರು ಯೋಜನೆಗೆ ಅಗತ್ಯವಿರುವ 132.53 ಎಕರೆ ಖಾಸಗಿ ಜಮೀನನ್ನು ಖರೀದಿಸಿದ್ದಾರೆಂದು ಹಾಗೂ ಅಗತ್ಯವಿರುವ ಯಂತ್ರೋಪಕರಣಗಳ ಖರೀದಿಗೆ ಕ್ರಮ ವಹಿಸಿರುವುದರಿಂದ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ಕ್ರೆಡಲ್‌ಗೆ ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ದಿನಾಂಕ 31-3-2012 ರವರೆಗೆ ವಿಸ್ತರಿಸಬಹುದಾಗಿಯೆಂದು ಸದರಿ ಅಭಿವೃದ್ಧಿದಾರರು ವೀಲಿಂಗ್ ಮತ್ತು ಬ್ಯಾಂಕಿಂಗ್ undertaking ಬರೆದುಕೊಟ್ಟಿರುವುದನ್ನು ಪರಿಶೀಲಿಸಿ ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 325 ಎನ್‌ಸಿಇ 2011, ಬೆಂಗಳೂರು, ದಿನಾಂಕ: 11–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್‌ರವರಿಗೆ ಚಿತ್ರದುರ್ಗ ಜಿಲ್ಲೆಯ ಪಲವನಹಳ್ಳಿ, ಜೋಗಿಮಠ ವಲಯ ಎಂಬಲ್ಲಿ ಹಂಚಿಕೆ ಮಾಡಿರುವ **9.0 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕ್ರೆಡಲ್‌ಗೆ ಕಾಲಾವಕಾಶದ ವಿಸ್ತರಣಾ ಶುಲ್ಕವನ್ನು ಪಾವತಿಸತಕ್ಕದ್ದೆಂಬ ಷರತ್ತಿಗೊಳಪಟ್ಟು ದಿನಾಂಕ 01–04–2011 ರಿಂದ ದಿನಾಂಕ **31–3–2012** ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿದೆ. ಸದರಿ ಕಂಪನಿಯವರು ಸಂಬಂಧಪಟ್ಟ ಎಸ್ಕಾಂ/ಕವಿಪ್ರನಿನಿ ನೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿಆರ್.ನಂ. 06

## ಇಂಧನ ಸಚಿವಾಲಯ

**ವಿಷಯ :** ಮೆ॥ ಕೆ.ಕೆ.ವಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ನಲ್ಗಂದಿನ್ನಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1)ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/06/SH-763/Nalgamdinni MHS/548, ದಿನಾಂಕ 11–02–2011 ಮತ್ತು ಕ್ರೆಡಲ್/06/SH-763/Nalgamdinni MHS/1436 ದಿನಾಂಕ 19–05–2011.

**2)** ದಿನಾಂಕ 27–05–2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಕೆ.ಕೆ.ವಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆ, ಮಾನ್ವಿ ತಾಲ್ಲೂಕು, ನಲ್ಗಂದಿನ್ನಿ ಗ್ರಾಮದ ಹತ್ತಿರ ಮಸ್ಕಿ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ನಲ್ಗಂದಿನ್ನಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಕೆ.ಕೆ.ವಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 110 ಎನ್‌ಸಿಇ 2011, ಬೆಂಗಳೂರು, ದಿನಾಂಕ : 02–11–2011.**

ಮೆ॥ ಕೆ.ಕೆ.ವಿ. ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆ, ಮಾನ್ವಿ ತಾಲ್ಲೂಕು, ನಲ್ಗಂದಿನ್ನಿ ಗ್ರಾಮದ ಹತ್ತಿರ ಮಸ್ಕಿ ನದಿಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ನಲ್ಗಂದಿನ್ನಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

| Company | MHS | Location | MW | Weir Latitude | Weir Longitude | Power House Latitude | Power House Longitude | FRL (M) | TWL (M) | Design Head | Design Disch-arge (Cum-ees) |
|---|---|---|---|---|---|---|---|---|---|---|---|
| M/s. KKV Energy India Pvt Ltd. | Nalgamdinni | Nalgamdinni village, Manvi Taluk, Raichur District. | 4.00 | 15°52' 15'' | 76°58' 36'' | 15°52' 28'' | 76°59' 40'' | 351.5 | 342 | 9.5 | 80 |

1 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು, ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು, ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

(ಈ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಮುಂತಾದ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2. ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ **3 ವರ್ಷದ** (ಮೂರು ವರ್ಷ) ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ **3 ವರ್ಷದ** ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

7. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

8. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

9. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

10. ಡಿ.ಪಿ.ಆರ್. ತಯಾರು ಮಾಡಿದ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (Implement) ಮಾಡದಹೊರತು ವರ್ಗಾವಣೆ/ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

12. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 07 ಇಂಧನ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ವಿವಿಧ ವೃಂದಗಳಲ್ಲಿ ಒಟ್ಟು 24 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂ. ಮೈನಪ್ರಾ/ಸಿಬ್ಬಂದಿ–1/2006–07, ದಿನಾಂಕ : 1–6–2006.
2. ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂ. ಮೈನಪ್ರಾ/ಸಿಬ್ಬಂದಿ–1/ಪಿಆರ್/45, 2008–09, ದಿನಾಂಕ : 30–10–2008.
3. ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂ. ಮೈನಪ್ರಾ/ಸಿಬ್ಬಂದಿ–1/ಪಿಆರ್/45/2008–09, ದಿನಾಂಕ : 20–10–2009.
4. ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂ. ಮೈನಪ್ರಾ/ಸಿಬ್ಬಂದಿ–3/ಪಿಆರ್/307/2009–10, ದಿನಾಂಕ : 26–8–2011.

**ಪ್ರಸ್ತಾವನೆ :**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ನೂರು ವರ್ಷಗಳ ಇತಿಹಾಸವನ್ನು ಪೂರೈಸಿದ್ದು ಪ್ರಾಧಿಕಾರದ ವ್ಯಾಪ್ತಿಯು ವಿಸ್ತೃತಗೊಂಡಿರುತ್ತದೆ. ಇದಕ್ಕನುಗುಣವಾಗಿ ತ್ವರಿತವಾದ ವಿವಿಧ ಯೋಜನೆಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಮತ್ತು ಎಲ್ಲಾ ಕ್ಷೇತ್ರಗಳಲ್ಲಿ ಕ್ಷಿಪ್ರಗತಿಯಲ್ಲಿ ಅಭಿವೃದ್ಧಿ ಸಾಧಿಸಬೇಕಾಗುತ್ತದೆ. ಈ ರೀತಿಯ ಸರ್ವಾಂಗೀಣ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಸಿಬ್ಬಂದಿ/ಅಧಿಕಾರಿಗಳ ಕೊರತೆ ಇರುವುದರಿಂದ ಈ ಕೊರತೆಗಳನ್ನು ನಿವಾರಿಸಲು ಅಗತ್ಯಕ್ಕೆ ತಕ್ಕಂತೆ ಸಿಬ್ಬಂದಿಯನ್ನು ನಿಯೋಜಿಸಲು ಹಾಲಿ ಇರುವ ದಿನಾಂಕ : 19–2–2004 ರಂದು ಪ್ರಕಟಿಸಿರುವ Mysore Development Authority (Cadre & Recruitment) regulations 2003 ವೃಂದ ಮತ್ತು

ನೇಮಕಾತಿ ನಿಯಮಗಳಲ್ಲಿನ ಹುದ್ದೆಗಳಲ್ಲದೆ, ಹೆಚ್ಚುವರಿ ಹುದ್ದೆಗಳನ್ನು ವಿವಿಧ ವೃಂದಗಳಲ್ಲಿ ಸೃಜಿಸುವ ಅನಿವಾರ್ಯತೆ ಉಂಟಾಗಿರುತ್ತದೆ. ಆದ್ದರಿಂದ ಉಲ್ಲೇಖ-1 ರಿಂದ ಉಲ್ಲೇಖ-3ರ ಪತ್ರಗಳ ಪ್ರಸ್ತಾವನೆಯಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕೆಲವು ಹುದ್ದೆಗಳನ್ನು ಸೃಜಿಸಿ, ಅಲ್ಲದೆ ಪ್ರಾಧಿಕಾರದಲ್ಲಿ ಭಾರಿ ವಾಹನಗಳು ಇಲ್ಲದೇ ಇರುವುದರಿಂದ 5 ಕ್ಲೀನರ್ ಹುದ್ದೆಗಳು ಅವಶ್ಯಕತೆ ಇಲ್ಲದೇ ಇರುವುದರಿಂದ ಇವುಗಳನ್ನು ಕಡಿತಗೊಳಿಸಲು ಹಾಗೂ ಸಹಾಯಕ ಅಭಿಯಂತರರ 2 ಹುದ್ದೆ ಹಾಗೂ ಕಿರಿಯ ಅಭಿಯಂತರರ 2 ಹುದ್ದೆಗಳನ್ನು ಕಡಿತಗೊಳಿಸಿ ವೃಂದ ಮತ್ತು ನೇಮಕಾತಿ ನಿಯಮಕ್ಕೆ ತಿದ್ದುಪಡಿ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಾಧಿಕಾರದ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರದ ಪತ್ರ ಸಂಖ್ಯೆ : ನಅಇ 31 ಅಪ್ರಾಸೇ 2005 ದಿನಾಂಕ : 24-1-2011 ದಿನಾಂಕ : 24-2-2011 ಮತ್ತು 22-8-2011ರ ಪತ್ರಗಳಲ್ಲಿ ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಪ್ರಾಧಿಕಾರದಲ್ಲಿ ಮಂಜೂರಾಗಿರುವ ಹುದ್ದೆಗಳು ಪ್ರಸ್ತುತ ವಿವಿಧ ವೃಂದಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿವರ, ಹುದ್ದೆಗಳ ಸೃಜನೆಯಿಂದ ಪ್ರಾಧಿಕಾರಕ್ಕೆ ತಗಲುವ ಆರ್ಥಿಕ ವೆಚ್ಚ ಇತ್ಯಾದಿ ವಿವರಗಳೊಂದಿಗೆ ಪ್ರಾಧಿಕಾರದಲ್ಲಿ ತಾತ್ಕಾಲಿಕ 43 ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜನೆ ಮಾಡುವ ಸಂಬಂಧದಲ್ಲಿ ಪ್ರತಿಯೊಂದು ವೃಂದದ ಕಾರ್ಯ ಒತ್ತಡ ವಿವರಗಳೊಂದಿಗೆ ವೃಂದವಾರು ಸಮರ್ಥನೆಗಳನ್ನು ನೀಡುವಂತೆ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದವರನ್ನು ಕೋರಲಾಗಿತ್ತು.

ಮೇಲೆ ಕ್ರಮ ಸಂಖ್ಯೆ : 4ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರರವರು ವರದಿ ಸಲ್ಲಿಸಿ ದಿನಾಂಕ : 19-2-2004ರಲ್ಲಿ ಪ್ರಕಟಿಸಿರುವ ವೃಂದ ಮತ್ತು ನೇಮಕಾತಿ ನಿಯಮಗಳು 2003ಕ್ಕೆ ತಿದ್ದುಪಡಿ ತರುವ ಸಂಬಂಧ ಪ್ರಾಧಿಕಾರದ ಉಪ-ಸಮಿತಿಯು ದಿನಾಂಕ: 19-3-2011 ರಂದು ತೆಗೆದುಕೊಂಡ ತೀರ್ಮಾನವನ್ನು ದಿನಾಂಕ : 23-7-2011ರಂದು ನಡೆದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸಾಮಾನ್ಯ ಸಭೆಯಲ್ಲಿ ಅನುಮೋದಿಸಿರುವುದನ್ನು ಉಲ್ಲೇಖಿಸಿ ಪ್ರಾಧಿಕಾರದಲ್ಲಿ ಇರುವ ಕಾರ್ಯ ಒತ್ತಡದ ವಿವರಗಳೊಂದಿಗೆ ಸೃಜಿಸಬೇಕಾದ ಹುದ್ದೆಗಳ ಬಗ್ಗೆ ಸಮರ್ಥನೆಯನ್ನು ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದವರು 43 ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜನೆ ಮಾಡುವ ಸಂಬಂಧದಲ್ಲಿ ಪ್ರತಿಯೊಂದು ಹುದ್ದೆಯ ಸೃಜನೆಯ ಅಗತ್ಯತೆಯನ್ನು ವಿವರಿಸಿರುವುದರಿಂದ ಹಾಗೂ ಇದಕ್ಕೆ ಸರ್ಕಾರದಿಂದ ಯಾವುದೇ ಅನುದಾನ ನೀಡುವ ಅವಶ್ಯಕತೆ ಇಲ್ಲದಿರುವುದರಿಂದ, ಅಲ್ಲದೇ 43 ಹುದ್ದೆಗಳ ಪೈಕಿ 19 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಖಾಯಂಗೊಳಿಸಲು ಕೋರಿದ್ದು, ಆದರೆ, ಹುದ್ದೆಗಳನ್ನು ತಾತ್ಕಾಲಿಕ ನೆಲೆಯಲ್ಲಿ ಸೃಜಿಸಬೇಕಾಗಿರುವುದರಿಂದ, ಈಗಾಗಲೇ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಪ್ರಸ್ತುತ ಚಾಲ್ತಿಯಲ್ಲಿ ಇರುವ ದಿನಾಂಕ : 19-2-2004 ರಂದು ಪ್ರಕಟಿಸಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸದರಿ 19 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ತಾತ್ಕಾಲಿಕ ನೆಲೆಯಲ್ಲಿ ಮಂಜೂರು ಮಾಡಿರುವುದರಿಂದ, ಈ 19 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಹೊರತುಪಡಿಸಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ತಾತ್ಕಾಲಿಕವಾಗಿ ಹೆಚ್ಚುವರಿ ವಿವಿಧ ವೃಂದದ 24 ಹುದ್ದೆಗಳನ್ನು ಸೃಜಿಸಿ, ಸದರಿ ಸೃಜನೆಯನ್ನು ಖಾಯಂ ಆಗಿ ಮುಂದೆ ಅನುಮೋದಿಸಬಹುದಾದ ಏಕರೂಪ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಳ್ಳುವ ಷರತ್ತಿಗೊಳಪಡಿಸಿ, ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 31 ಅಪ್ರಾಸೇ 2005, ಬೆಂಗಳೂರು, ದಿನಾಂಕ : 12-1-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಈ ಕೆಳಕಂಡ 24 ವಿವಿಧ ವೃಂದದ ಹುದ್ದೆಗಳನ್ನು ಮುಂದೆ ಅನುಮೋದಿಸಬಹುದಾದ ಏಕರೂಪ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿಕೊಳ್ಳುವ ಷರತ್ತಿಗೊಳಪಡಿಸಿ, ತಾತ್ಕಾಲಿಕವಾಗಿ ಸೃಜಿಸಿ ಆದೇಶಿಸಿದೆ.

**ಸೃಜಿಸಲಾದ ಹುದ್ದೆಗಳು**

| ಕ್ರಮ ಸಂ. | ಹುದ್ದೆಯ ಹೆಸರು ಮತ್ತು ವೇತನ ಶ್ರೇಣಿ | ಹಾಲಿ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಇರುವ ಹುದ್ದೆಗಳ ಸಂಖ್ಯೆ | ತಾತ್ಕಾಲಿಕವಾಗಿ ಸೃಜಿಸಲಾಗಿರುವ ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|---|
| 1 | 2 | 3 | 4 | 5 |
| 1 | ಕಾರ್ಯಪಾಲಕ ಅಭಿಯಂತರರು ವೇತನ ಶ್ರೇಣಿ : 18150-26925 | 1 | 1 | ಒಂದು ಹುದ್ದೆಯನ್ನು ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇಲೆ ಹಾಗೂ ಮತ್ತೊಂದು ಹುದ್ದೆಯನ್ನು ಪ್ರಾಧಿಕಾರದಲ್ಲಿನ ಸಹಾಯಕ ಕಾರ್ಯಪಾಲಕ ಅಭಿಯಂತರರ ವೃಂದದಿಂದ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. |
| 2 | ಸಹಾಯಕ ಕಾರ್ಯಪಾಲಕ ಅಭಿಯಂತರರು ವೇತನ ಶ್ರೇಣಿ : 14050 ರಿಂದ 25050 | 6 | 2 | ಸೃಜಿಸಲಾಗಿರುವ 2 ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗಳಿಗೆ ಪ್ರಾಧಿಕಾರದ ಸಹಾಯಕ ಅಭಿಯಂತರರ ವೃಂದದಿಂದ ನಿಯಮಾನುಸಾರ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. |
| 3 | ತಾಂತ್ರಿಕ ಸಹಾಯಕರು ವೇತನ ಶ್ರೇಣಿ 14050 ರಿಂದ 25050 | - | 3 | ಸೃಜಿಸಲಾಗಿರುವ 3 ತಾಂತ್ರಿಕ ಸಹಾಯಕರ ಹುದ್ದೆಗಳನ್ನು ಪ್ರಾಧಿಕಾರದ ಸಹಾಯಕ ಅಭಿಯಂತರರ ವೃಂದದಿಂದ ನಿಯಮಾನುಸಾರ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. ಈ ಪೈಕಿ ಒಂದು ಹುದ್ದೆಯನ್ನು ಅಧೀಕ್ಷಕ ಅಭಿಯಂತರರಿಗೆ ತಾಂತ್ರಿಕ ಸಹಾಯಕರಾಗಿ ಹಾಗೂ ಉಳಿದ ಎರಡು ಹುದ್ದೆಗಳನ್ನು ಕಾರ್ಯಪಾಲಕ ಅಭಿಯಂತರರಿಗೆ ತಾಂತ್ರಿಕ ಸಹಾಯಕರಾಗಿ ಕರ್ತವ್ಯ ನಿರ್ವಹಿಸುವುದು. |

| | | | | |
|---|---|---|---|---|
| 4 | ತಾಂತ್ರಿಕ ಸಲಹೆಗಾರರು ಆಯುಕ್ತರಿಗೆ ವೇತನ ಶ್ರೇಣಿ : 14050 ರಿಂದ 25050 | – | 1 | ಸೃಜಿಸಲಾಗಿರುವ 1 ತಾಂತ್ರಿಕ ಸಲಹೆಗಾರರ ಹುದ್ದೆಯನ್ನು ಪ್ರಾಧಿಕಾರದ ಸಹಾಯಕ ಅಭಿಯಂತರರ ವೃಂದದಿಂದ ನಿಯಮಾನುಸಾರ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. ( ಈ ಹುದ್ದೆಯನ್ನು ಆಯುಕ್ತರಿಗೆ ತಾಂತ್ರಿಕ ಸಲಹೆಗಾರರಾಗಿ ಕರ್ತವ್ಯ ನಿರ್ವಹಿಸಲು ನಿಯೋಜಿಸುವುದು). |
| 5 | ನಗರ ಯೋಜನಾ ಸಹಾಯಕ ನಿರ್ದೇಶಕರು ವೇತನ ಶ್ರೇಣಿ : 14050 ರಿಂದ 25050 | – | 1 | ಸೃಜಿಸಲಾಗಿರುವ 1 ನಗರ ಯೋಜನಾ ಸಹಾಯಕ ನಿರ್ದೇಶಕರ ಹುದ್ದೆಯನ್ನು ಪ್ರಾಧಿಕಾರದ ನಗರ ಯೋಜನಾ ಶಾಖೆಯಲ್ಲಿ ಅನುಭವ ಹೊಂದಿರುವ ಪ್ರಾಧಿಕಾರದ ಸಹಾಯಕ ಅಭಿಯಂತರರ ಹುದ್ದೆಯಲ್ಲಿ ನಿಯಮಾನುಸಾರ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. ಈ ಹುದ್ದೆಯನ್ನು ನಗರ ಯೋಜನಾ ಸದಸ್ಯರ/ ಜಂಟಿ ನಿರ್ದೇಶಕರ ಅಧೀನದಲ್ಲಿ ಕರ್ತವ್ಯ ನಿರ್ವಹಿಸಲು ನಿಯೋಜಿಸುವುದು. |
| 6 | ಸಹಾಯಕ ಕಾರ್ಯದರ್ಶಿ ವೇತನ ಶ್ರೇಣಿ : 11400 ರಿಂದ 21600 | 1 | 1 | ಸೃಜಿಸಲಾಗಿರುವ 1 ಸಹಾಯಕ ಕಾರ್ಯದರ್ಶಿ ಹುದ್ದೆಯನ್ನು ಪ್ರಾಧಿಕಾರದ ವ್ಯವಸ್ಥಾಪಕರಿಗೆ ಬಡ್ತಿ ನೀಡುವುದರ ಮೂಲಕ ತುಂಬುವುದು. |
| 7 | ಸಹಾಯಕ ನಿರ್ದೇಶಕರು ತೋಟಗಾರಿಕೆ ವೇತನ ಶ್ರೇಣಿ : 11400 ರಿಂದ 21600 | – | 1 | ಸೃಜಿಸಲಾಗಿರುವ 1 ಸಹಾಯಕ ನಿರ್ದೇಶಕರ ಹುದ್ದೆಯನ್ನು ಪ್ರಾಧಿಕಾರದ ಸಹಾಯಕ ತೋಟಗಾರಿಕಾ ಅಧಿಕಾರಿ ಹುದ್ದೆಯಿಂದ ನಿಯಮಾನುಸಾರ ಮುಂಬಡ್ತಿ ಮೂಲಕ ಭರ್ತಿ ಮಾಡುವುದು. |
| 8 | ವಿಶೇಷ ತಹಶೀಲ್ದಾರ್ ವೇತನ ಶ್ರೇಣಿ : 11400 ರಿಂದ 21600 | 1 | 2 | ಸೃಜಿಸಲಾಗಿರುವ 2 ವಿಶೇಷ ತಹಶೀಲ್ದಾರ್ ಹುದ್ದೆಗಳನ್ನು ಕಂದಾಯ ಇಲಾಖೆ ತಹಶೀಲ್ದಾರ್ ಹುದ್ದೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡುವುದು |
| 9 | ಸಿಸ್ಟಂ ಅನಾಲಿಸ್ಟ್ ವೇತನ ಶ್ರೇಣಿ : 18150 ರಿಂದ 26925 | – | 1 | ಪ್ರಸ್ತುತ ಪ್ರಾಧಿಕಾರದಲ್ಲಿ ಈ ಹುದ್ದೆಯನ್ನು ಪಡೆಯಲು ಶೈಕ್ಷಣಿಕ ಅರ್ಹತೆ ಹೊಂದಿದವರಿಗೆ ಬಡ್ತಿ ನೀಡಬಹುದಾಗಿದೆ ಅಥವಾ ಪ್ರಾಧಿಕಾರದಲ್ಲಿ ಲಭ್ಯವಿಲ್ಲದಿದ್ದಲ್ಲಿ ಎನ್.ಐ.ಸಿ., ಇಂದ ನಿಯೋಜನೆ ಮೂಲಕ ಭರ್ತಿ ಮಾಡಬಹುದಾಗಿದೆ. |
| 10 | ವ್ಯವಸ್ಥಾಪಕರು ವೇತನ ಶ್ರೇಣಿ : 10000 ರಿಂದ 18150 | 4 | 4 | 2 ಹುದ್ದೆಗಳನ್ನು ಕಂದಾಯ ಇಲಾಖೆಯಿಂದ ಪ್ರತಿನಿಯೋಜನೆ ಮೇರೆಗೆ ಹಾಗೂ ಉಳಿದ 6 ಹುದ್ದೆಗಳನ್ನು ಪ್ರಾಧಿಕಾರದ ಪ್ರಥಮ ದರ್ಜೆ ಸಹಾಯಕರ/ ಶೀಘ್ರಲಿಪಿಗಾರರ ವೃಂದದಿಂದ 1:8ರ ಅನುಪಾತದಲ್ಲಿ ಬಡ್ತಿ ನೀಡುವುದು. |
| 11 | ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು ವೇತನ ಶ್ರೇಣಿ : 7275 ರಿಂದ 13350 | 2 | 3 | ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರ ಹುದ್ದೆಗಳನ್ನು ಕಂದಾಯ ಇಲಾಖೆಯಿಂದ ನಿಯೋಜನೆ ಮೇಲೆ ತುಂಬುವುದು. |
| 12 | ಲೆಕ್ಕ ಗುಮಾಸ್ತರು ವೇತನ ಶ್ರೇಣಿ : 7275 ರಿಂದ 13350 | 2 | 2 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ತುಂಬಬಹುದು. |
| 13 | ಪ್ರಥಮ ದರ್ಜೆ ಮೋಜಣಿದಾರರು ವೇತನ ಶ್ರೇಣಿ : 7275 ರಿಂದ 13350 | 1 | 2 | ಪ್ರಥಮ ದರ್ಜೆ ಮೋಜಣಿದಾರರ ಹುದ್ದೆಗಳನ್ನು ಭೂ ಮಾಪನ ಇಲಾಖೆಯಿಂದ ಪ್ರತಿ ನಿಯೋಜನೆ ಮೇರೆಗೆ ಭರ್ತಿ ಮಾಡುವುದು. |
| | **ಒಟ್ಟು ಹುದ್ದೆ** | | **24** | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂ. ಆಇ 553 ವೆಚ್ಚ–9/2010, ದಿನಾಂಕ: 17–1–2011 ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 336

## ಇಂಧನ ಸಚಿವಾಲಯ

**ವಿಷಯ :** ಮೆ: ಇಂಡೊವಿಂಡ್ ಎನರ್ಜಿ ಲಿಮಿಟೆಡ್ ರವರಿಗೆ 1.92 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು ಮೆ: ಆರ್‌ಪಿಜಿ ಕೇಬಲ್ಸ್ ಲಿಮಿಟೆಡ್ ರವರಿಂದ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಡಿಇ 55 ಎನ್‌ಸಿಇ 1996, ದಿನಾಂಕ : 17–1–1996.

**2.** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/08/IWEL-1.92 MW (RPG Cables Ltd/2011/4098, ದಿನಾಂಕ : 17/18–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ: ಆರ್‌ಪಿಜಿ ಕೇಬಲ್ಸ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಹನುಮಸಾಗರ ಇಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಸ್ವಂತ ಬಳಕೆಗಾಗಿ ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಆರ್‌ಪಿಜಿ ಕೇಬಲ್ಸ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಹನುಮಸಾಗರದಲ್ಲಿ ಮಂಜೂರಾಗಿರುವ (ಪ್ರಸಕ್ತ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು, ಮಾವಿನಇಟಗಿ ಹಾಗೂ ಹನುಮಸಾಗರ ಗ್ರಾಮಗಳಲ್ಲಿ) 2.00 ಮೆಗಾ ವ್ಯಾಟ್‌ನಲ್ಲಿ ಅನುಷ್ಠಾನಗೊಂಡಿರುವ 1.92 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಇಂಡೊವಿಂಡ್ ಎನರ್ಜಿ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 415 ಎನ್‌ಸಿಇ 2011, ಬೆಂಗಳೂರು, ದಿನಾಂಕ : 22–11–2011**

ಮೆ: ಆರ್‌ಪಿಜಿ ಕೇಬಲ್ಸ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ಹನುಮಸಾಗರದಲ್ಲಿ ಮಂಜೂರಾಗಿರುವ (ಪ್ರಸಕ್ತ ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು, ಮಾವಿನಇಟಗಿ ಹಾಗೂ ಹನುಮಸಾಗರ ಗ್ರಾಮಗಳಲ್ಲಿ) 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ ಅನುಷ್ಠಾನಗೊಂಡಿರುವ 1.92 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಇಂಡೊವಿಂಡ್ ಎನರ್ಜಿ ಲಿಮಿಟೆಡ್ ಕಂಪನಿಗೆಯವರಿಗೆ ಕೊಪ್ಪಳ ಜಿಲ್ಲೆಯ, ಕುಷ್ಟಗಿ ತಾಲ್ಲೂಕಿನ ಮಾವಿನಇಟಗಿ ಮತ್ತು ಹನುಮಸಾಗರ ಗ್ರಾಮಗಳಲ್ಲಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ :–

| Sl. No. | Village Name | Taluk & District | Land Survey Number | Extent (A-G) | Wind Turbine Generator location Nos. |
|---|---|---|---|---|---|
| 1. | Mavinaitagi | Kustagi/Koppal | 75/1 | 5.27 | K24/H<br>K25/H |
| 2. | Mavinaitagi | | 75/4 | 2.33 | K23/H |
| 3. | Hanumasagar | | 3 | 8.05 | K20/H<br>K21/H<br>K22/H |

1. ಮೆ: ಇಂಡೊವಿಂಡ್ ಎನರ್ಜಿ ಲಿಮಿಟೆಡ್ ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಮೆ: ಇಂಡೊವಿಂಡ್ ಎನರ್ಜಿ ಲಿಮಿಟೆಡ್ ರವರು ಸಂಬಂಧಪಟ್ಟ ಎಸ್ಕಾಂ/ಕವಿಪ್ರನಿನಿ ನೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ.
3. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 8 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2011–12ರ ಹಣಕಾಸು ವರ್ಷದಲ್ಲಿ ಮೂರನೇ ಕಂತು ಸಹಾಯಾನುದಾನದ ಹಣ ಬಿಡುಗಡೆ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ದಿನಾಂಕ : 20–4–2011.

**2.** ಸರ್ಕಾರಿ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ದಿನಾಂಕ : 6–7–2011.

**ಪ್ರಸ್ತಾವನೆ :**

1. 2011–12ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ 408 ಲಕ್ಷ ರೂ.ಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

2. ಮೇಲೆ ಓದಲಾದ ಸರ್ಕಾರಿ ಆದೇಶ 1 ಮತ್ತು 2ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2011–12ನೇ ಸಾಲಿಗೆ ಮೊದಲನೇ ಹಾಗೂ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 2,04,00,000/–ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2011–12ನೇ ಸಾಲಿಗೆ ಮೂರನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 1,02,00,000/–ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ : 17–11–2011**

ಸರ್ಕಾರವು, 2011–12ನೇ ಹಣಕಾಸು ವರ್ಷದ ಮೂರನೇ ತ್ರೈಮಾಸಿಕ ಅವಧಿಗೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 1,02,00,000/– (ಒಂದು ಕೋಟಿ ಎರಡು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ : 2–9–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ : 16–5–2008, ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–4–2010 ಮತ್ತು ಎಫ್‌ಡಿ 4 ಬಿಪಿಇ 2011, ದಿನಾಂಕ : 31–3–2011ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 9 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** **ಮೆ:** ಕುಕ್ಕೆ ಹೈಡ್ರೋ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ರವರ ಕುಕ್ಕೆ ಸ್ಟೇಜ್–1 ಕಿರು ಜಲ ವಿದ್ಯುತ್ ಯೋಜನೆಯನ್ನು 12.50 ಮೆ.ವ್ಯಾ. ನಿಂದ 24.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 126 ಎನ್‌ಸಿಇ 2011 (1), ದಿನಾಂಕ : 26–3–2011.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿಎಲ್/06/SH-205A/Kukke Stage-1 MHS/4218, ದಿನಾಂಕ : 29–10–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಕುಕ್ಕೆ ಹೈಡ್ರೋ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕಿನ, ಪೆರಾಬೆ ಕಂತೂರು ಮತ್ತು ಚಾರ್‍ವಾಕ ಗ್ರಾಮಗಳಲ್ಲಿ ಕುಮಾರಧಾರ ನದಿಗೆ ಅಡ್ಡಲಾಗಿ 12.50 ಮೆ.ವ್ಯಾ ಸಾಮರ್ಥ್ಯದ ಕುಕ್ಕೆ ಸ್ಟೇಜ್–1 ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ: ಕುಕ್ಕೆ ಹೈಡ್ರೋ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಕುಮಾರಧಾರ ನದಿಗೆ ಅಡ್ಡಲಾಗಿ 12.50 ಮೆ.ವ್ಯಾ. ಸಾಮರ್ಥ್ಯದ ಕುಕ್ಕೆ ಸ್ಟೇಜ್–1 ಕಿರು ಜಲ ವಿದ್ಯುತ್ ಯೋಜನೆಯ ಸ್ಥಳವು ಪಶ್ಚಿಮ ಘಟ್ಟಗಳ ಪ್ರದೇಶದಲ್ಲಿ ಬರುತ್ತಿದ್ದರೂ, ಖಾಸಗಿ ಜಮೀನಿನಲ್ಲಿ ಬರುತ್ತದೆ. ಸರ್ಕಾರಿ ಜಮೀನು ಮತ್ತು ಅರಣ್ಯ ಭೂಮಿ ಹೊಂದಿರುವುದಿಲ್ಲವಾದ್ದರಿಂದ ಮತ್ತು ಖಾಸಗಿ ಜಮೀನಿನ ಮಾಲೀಕರು ಯೋಜನೆಗೆ ಅಗತ್ಯವಿರುವ ಜಮೀನಿನ ಮಾರಾಟಕ್ಕೆ ಒಪ್ಪಿಗೆ ನೀಡಿದ್ದಾರೆ ಹಾಗೂ ಈ ಯೋಜನೆಯು ನ್ಯಾಯಾಲಯದ ಮುಂದಿರುವ ಪಿಐಎಲ್‌ಗೆ ಸಂಬಂಧಿಸಿರುವುದಿಲ್ಲ. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯೋಜನೆಗಳು ಯಾವುದೂ ಈ ಯೋಜನಾ ಪ್ರದೇಶದಲ್ಲಿ ಇರುವುದಿಲ್ಲ. ಪ್ರಸ್ತುತ ಕುಕ್ಕೆ ಸ್ಟೇಜ್–1 ಕಿರು ಜಲ ವಿದ್ಯುತ್ ಯೋಜನೆಯನ್ನು ಮಾತ್ರ ಪರಿಗಣಿಸಿ ಮಂಜೂರಾಗಿರುವ 12.50 ಮೆ.ವ್ಯಾ. ಸಾಮರ್ಥ್ಯದಿಂದ 24.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಲು ಹಾಗೂ ಅಭಿವೃದ್ಧಿದಾರರು ಈ ಯೋಜನೆಯನ್ನು ಡಿಸೆಂಬರ್ 2014ರೊಳಗಾಗಿ ಅನುಷ್ಠಾನಗೊಳಿಸುವುದಾಗಿಯೂ ತಿಳಿಸಿದ್ದರ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 126 ಎನ್‌ಸಿಇ 2011, ಬೆಂಗಳೂರು, ದಿನಾಂಕ : 28–11–2011**

ಮೆ: ಕುಕ್ಕೆ ಹೈಡ್ರೋ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕಿನ, ಪೆರಾಬೆ ಕಂತೂರು ಮತ್ತು ಚಾರ್‍ವಾಕ ಗ್ರಾಮಗಳಲ್ಲಿ ಕುಮಾರಧಾರ ನದಿಗೆ ಅಡ್ಡಲಾಗಿ 12.50 ಮೆ.ವ್ಯಾ ಸಾಮರ್ಥ್ಯದ ಕುಕ್ಕೆ ಸ್ಟೇಜ್–1 ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಸಾಮರ್ಥ್ಯವನ್ನು 24.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಲಾಗಿದೆ :–

1. ಮೆ: ಕುಕ್ಕೆ ಹೈಡ್ರೋ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ರವರು 45 ದಿನಗಳ ಒಳಗೆ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಕಂಪನಿಯು ಯೋಜನೆಯನ್ನು ಡಿಸೆಂಬರ್ 2013 ರೊಳಗಾಗಿ ಅನುಷ್ಠಾನಗೊಳಿಸಬೇಕು.
3. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
4. ಮೇಲೆ ಓದಲಾದ (1) ರ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 10 ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕ ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಇಎನ್ 61 ಎನ್‌ಸಿಇ 2011, ದಿನಾಂಕ : 1-7-2011.

2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಸಿಇ (ಇಐ&ಟಿಎ)/ಸೌರಶಕ್ತಿ/230, ದಿನಾಂಕ : 28-7-2011.

**ಪ್ರಸ್ತಾವನೆ :**

ಕರ್ನಾಟಕ ನವೀಕರಿಸಬಹುದಾದ ಇಂಧನ ನೀತಿಯಡಿಯಲ್ಲಿ ಸೌರವಿದ್ಯುತ್ತನ್ನು ಉತ್ತೇಜಿಸುವ ಮುಖ್ಯ ಉದ್ದೇಶದಿಂದ ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಸರ್ಕಾರವು ಸೌರ ವಿದ್ಯುತ್ ನೀತಿ 2011-16ರನ್ನು ಪ್ರಕಟಿಸಿರುತ್ತದೆ. ಈ ನೀತಿಯ ನಿಯಮ (9) ಈ ಕೆಳಕಂಡಂತಿವೆ :

ಸೌರ ವಿದ್ಯುತ್ತನ್ನು ಹೊರ ರಾಜ್ಯದ ಶಾಖೋತ್ಪನ್ನ ವಿದ್ಯುತ್‌ನೊಂದಿಗೆ ಸಂಯೋಜಿಸಿ, ಕೆ.ಇ.ಆರ್.ಸಿ. ಯಿಂದ ಅನುಮೋದನೆಗೊಳಪಟ್ಟು, ಸರ್ಕಾರವು ನಿಗದಿ ಪಡಿಸಿದ ದರದಂತೆ ವಿದ್ಯುತ್ ನೀಡುವ ಸಲುವಾಗಿ, ಕೇಂದ್ರ ಅಥವಾ ಕರ್ನಾಟಕ ರಾಜ್ಯದ ಸ್ವಾಮ್ಯಕ್ಕೊಳಪಟ್ಟ ಸಂಸ್ಥೆಗಳಿಂದ ಸ್ಥಾಪಿಸಲ್ಪಡುವ. 50 ಮೆ.ವ್ಯಾ. ಯೋಜನೆ ಸಾಮರ್ಥ್ಯವನ್ನು, ಸೌರ ವಿದ್ಯುತ್ ಘಟಕಗಳಿಗೆ ಹಂಚಿಕೆ ನೀಡುವ ಹಕ್ಕನ್ನು ಸರ್ಕಾರವು ಮೀಸಲಿರಿಸಿಕೊಂಡಿರುತ್ತದೆ. ಗರಿಷ್ಠ 50 ಮೆ.ವ್ಯಾ. ಸೌರ ಶಕ್ತಿಯನ್ನು ಈ ಕಲಮಿನಡಿ ಅನುಮೋದನೆ ನೀಡಲಾಗುತ್ತದೆ ಕಲಂ 4 ರಲ್ಲಿ ಸೂಚಿಸಿರುವ ಒಟ್ಟು ಸಾಮರ್ಥ್ಯದ 200 ಮೆ.ವ್ಯಾ. ವನ್ನೂ ಬಿಟ್ಟು ಇದು ಸೇರಿರುತ್ತದೆ.

ಮೇಲೆ ಓದಲಾದ (2)ರ ದಿನಾಂಕ : 28-7-2011ರ ಪತ್ರದಲ್ಲಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಕಾಗಿನಲೆ ಗ್ರಾಮದ ಸರ್ವೆ ನಂ. 74ರ 50 ಎಕರೆ ಸರ್ಕಾರಿ ಜಮೀನಿನಲ್ಲಿ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕ ನಿರ್ಮಿಸುವ ಉದ್ದೇಶಹೊಂದಿದ್ದು, ಈ ಸಂಬಂಧ ಈಗಾಗಲೇ ಪ್ರಕ್ರಿಯೆಗಳನ್ನು ಪ್ರಾರಂಭಿಸಿರುವುದರಿಂದ ಈ ಯೋಜನೆಗೆ ಸರ್ಕಾರದಿಂದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಸೌರ ವಿದ್ಯುತ್ ನೀತಿ 2011-16ರ ಪ್ರಕಾರ ರಾಜ್ಯ ಸರ್ಕಾರ/ಕೇಂದ್ರ ಸರ್ಕಾರದ ನಿಗಮಗಳಿಗೆ ಅನುಮತಿ ನೀಡಲು ಅವಕಾಶ ಇರುವುದರಿಂದ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬ್ಯಾಡಗಿ ತಾಲ್ಲೂಕಿನ ಕಾಗಿನಲೆ ಗ್ರಾಮದಲ್ಲಿ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕವನ್ನು ಸ್ಥಾಪಿಸಲು ಅನುಮತಿ ನೀಡುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 53 ಎನ್‌ಸಿಇ 2011, ಬೆಂಗಳೂರು, ದಿನಾಂಕ : 21-11-2011**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಕಾಗಿನಲೆ ಗ್ರಾಮದ ಸರ್ವೆನಂ. 74ರಲ್ಲಿನ 50 ಎಕರೆ ಸರ್ಕಾರಿ ಜಮೀನಿನಲ್ಲಿ 5.00 ಮೆ.ವ್ಯಾ. ಸಾಮರ್ಥ್ಯದ ಸೌರ ವಿದ್ಯುತ್ ಘಟಕವನ್ನು ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 11

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರ ಕಛೇರಿಗೆ ಕೇಂದ್ರ ಸರ್ಕಾರದ ICDS (Integrated Child Development Services) ಯೋಜನೆಯ ಅನುಷ್ಠಾನಕ್ಕೆ ಹುದ್ದೆಗಳನ್ನು ಸೃಜಿಸುವ ಬಗ್ಗೆ-ಆದೇಶ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಂವಿ 71 ಭೂದಾಪು 2009, ದಿನಾಂಕ : 26-7-2010.

2. ಸರ್ಕಾರದ ಆದೇಶ ಸಂಖ್ಯೆ : ಮಮಇ 250 ಎಸ್‌ಜೆಡಿ 2010, ದಿನಾಂಕ : 5-11-2010.

3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರವರ ಕಛೇರಿಯ ಪತ್ರ ಸಂಖ್ಯೆ : ಮಮಅಇ/ಯೋಜನೆ/08/2010-11 (ಭಾಗ-1) ದಿನಾಂಕ : 23-7-2011 ಹಾಗೂ ದಿನಾಂಕ: 29-9-2011.

**ಪ್ರಸ್ತಾವನೆ :**

ನೂತನವಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರ ಕಛೇರಿಗೆ ಕೇಂದ್ರ ಸರ್ಕಾರದ ICDS (Integrated Child Development Services) ಯೋಜನೆಯ ಅನುಷ್ಠಾನಕ್ಕೆ ಹುದ್ದೆಗಳನ್ನು ಸೃಜಿಸುವಂತೆ ಕೋರಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ : 23-7-2011 ಹಾಗೂ 29-9-2011 ರ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 130 ಎಸ್‌ಜೆಡಿ 2011, ಬೆಂಗಳೂರು, ದಿನಾಂಕ : 24-11-2011**

ಯಾದಗಿರಿ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರ ಕಛೇರಿಗೆ ಕೇಂದ್ರ ಸರ್ಕಾರದ ICDS (Integrated Child Development Services) ಯೋಜನೆಯ ಅನುಷ್ಠಾನಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1. | ಕಛೇರಿ ಅಧೀಕ್ಷಕ | ರೂ. 10,000-18150 | 01 |
| 2. | ಸಾಂಖ್ಯಿಕ ಸಹಾಯಕ | ರೂ. 7275-13350 | 01 |
| 3. | ಪ್ರಥಮ ದರ್ಜೆ ಸಹಾಯಕ | ರೂ. 7275-13350 | 01 |
| 4. | ದ್ವಿತೀಯ ದರ್ಜೆ ಸಹಾಯಕ | ರೂ. 5800-10550 | 01 |

ಇದರ ವೆಚ್ಚವನ್ನು ಕೇಂದ್ರ ಸರ್ಕಾರದ ICDS ಯೋಜನೆಯಡಿ ರಾಜ್ಯ ಸರ್ಕಾರಕ್ಕೆ ನೀಡುವ ಅನುದಾನದಿಂದ ಭರಿಸತಕ್ಕದ್ದು. ಹಾಗೂ ಸದರಿ ಯೋಜನೆಯು ಮುಕ್ತಾಯಗೊಂಡ ಕೂಡಲೇ ಈ ಹುದ್ದೆಗಳು ಸಹ ರದ್ದಾಗತಕ್ಕದ್ದು (co-terminus)

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ : ಆಇ 732 ವೆಚ್ಚ–3/2011, ದಿನಾಂಕ: 16–11–2011ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಪಿ.ಆರ್. 12 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಶಶಿವರ್ಮ ಡಿ., ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅಗಡಿ, ಹಾವೇರಿ ತಾಲ್ಲೂಕು/ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ (3) 97/2011–12, ದಿನಾಂಕ : 29–8–2011.

**ಪ್ರಸ್ತಾವನೆ :**

ಡಾ॥ ಶಶಿವರ್ಮ ಡಿ., ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ/303/ಹೆಚ್‌ಎಸ್‌ಹೆಚ್/2010 ಮತ್ತು ಅಧಿಸೂಚನೆ ಸಂಖ್ಯೆ : ಆಕುಕ 500 ಹೆಚ್‌ಎಸ್‌ಹೆಚ್ 2010, ದಿನಾಂಕ : 12–10–2010ರ ಪ್ರಕಾರ ಪ್ರಾಥಮಿಕ ಆರೋಗ್ಯ ಕೇಂದ್ರ, ಅಗಡಿ, ಹಾವೇರಿ ತಾಲ್ಲೂಕು/ಜಿಲ್ಲೆ ನೇಮಕಾತಿ ಮಾಡಲಾಗಿ ದಿನಾಂಕ : 23–10–2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ನಂತರ ಉನ್ನತ ವ್ಯಾಸಂಗದ ಉದ್ದೇಶಕ್ಕಾಗಿ ರಾಜೀನಾಮೆ ಸಲ್ಲಿಸಿ, ದಿನಾಂಕ : 16–7–2011 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ತರಹದ ಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ : 16–7–2011 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ : ಆಕುಕ 374 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 16–11–2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಶಶಿವರ್ಮ ಡಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಅಗಡಿ, ಹಾವೇರಿ ತಾಲ್ಲೂಕು/ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 16–7–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 13 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಭಾರತಿ ಆರ್, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ದಿಬ್ಬೂರು, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ (1) 297/2010–11, ದಿನಾಂಕ : 30–9–2011.

**ಪ್ರಸ್ತಾವನೆ :**

ಡಾ॥ ಭಾರತಿ ಆರ್. ಇವರು ವಿಶೇಷ ನೇಮಕಾತಿ ಸಮಿತಿಯಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 122 ಹೆಚ್‌ಎಸ್‌ಹೆಚ್ 2007, ದಿನಾಂಕ : 8–3–2008 ರನ್ವಯ ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿ ದಿನಾಂಕ : 26–2–2008 ರಂದು ಹುದ್ದೆಗೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ : 1–7–2011 ರಿಂದ ಅನಧಿಕೃತ ಗೈರುಹಾಜರಾಗಿ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿರುತ್ತಾರೆ. ಇವರ ಖಾಯಂಪೂರ್ವ ಸೇವಾವಧಿ ಘೋಷಣೆಯಾಗದಿರುವುದರಿಂದ, ಪ್ರೊಬೆಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 462 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 11–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಭಾರತಿ ಆರ್. ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ದಿನಾಂಕ : 1–7–2011 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ: 1–7–2011 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 14 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಆರ್. ಸುನೀಲ್ ಕುಮಾರ್, ವೈದ್ಯಾಧಿಕಾರಿ, ಸ.ಆ. ಕೇಂದ್ರ, ಇಟಗಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ (4ಎ) 65/2011-12, ದಿನಾಂಕ : 9-9-2011.

**ಪ್ರಸ್ತಾವನೆ :**

ಡಾ॥ ಆರ್. ಸುನೀಲ್ ಕುಮಾರ್, ವೈದ್ಯಾಧಿಕಾರಿ, ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 303 ಹೆಚ್‌ಎಸ್‌ಹೆಚ್ 2010 ದಿನಾಂಕ : 9-9-2010ರನ್ವಯ ಸಮುದಾಯ ಆರೋಗ್ಯ ಕೇಂದ್ರ, ಇಟಗಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇಲ್ಲಿ ದಿನಾಂಕ : 18-9-2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ವೈದ್ಯರು ದಿನಾಂಕ : 19-9-2010 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ನಂತರ ದಿನಾಂಕ : 4-3-2011 ರಂದು ಮನವಿ ಸಲ್ಲಿಸಿ, ಹೆಚ್ಚಿನ ವ್ಯಾಸಂಗಕ್ಕೆ ತೆರಳುವುದರಿಂದ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ. ಆದರೆ ಈ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲೇ ಅನಧಿಕೃತ ಗೈರುಹಾಜರಾಗಿರುವುದರಿಂದ ಪ್ರೊಬೆಷನರಿ ನಿಯಮಗಳನ್ವಯ ದಿನಾಂಕ: 19-9-2010 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಿಮೋಚನೆಗೊಳಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ವೈದ್ಯರು ರಾಜೀನಾಮೆಯನ್ನು ಸಲ್ಲಿಸಿ ಅಂಗೀಕರಿಸಲು ಕೋರಿರುವುದನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 392 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 17-11-2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಆರ್. ಸುನೀಲ್ ಕುಮಾರ್, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಇಟಗಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 19-9-2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು).

ಪಿ.ಆರ್. 15

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ/ಫೆಲೋಶಿಪ್ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳ ಮಾಸಿಕ ಶಿಷ್ಯ ವೇತನ (stipend) ವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಅಕುಕ 122 ಎಂಎಸ್‌ಎಫ್ 2006, ದಿನಾಂಕ 26-06-2006.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 28 ಎಂಪಿಎಸ್ 2009, ದಿನಾಂಕ 26-09-2008
3. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಂಇಎಸ್ (2)/49/2008-09, ದಿನಾಂಕ 20-10-2009.
4. ನಿರ್ದೇಶಕರು, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಬೆಂವೈವಿಸಂಸಂ/ಶಿ.ವೇ/9/2011-12, ದಿನಾಂಕ 03-11-2011

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ. 6,000, ರೂ. 11,000 ಮತ್ತು ರೂ. 13,000/-ಗಳ ಮಾಸಿಕ ಶಿಷ್ಯ ವೇತನ (stipend) ವನ್ನು ನಿಗದಿಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ. 8,000, ರೂ. 14,000 ಮತ್ತು ರೂ. 17,000/-ಗಳ ಮಾಸಿಕ ಶಿಷ್ಯ ವೇತನ (stipend) ವನ್ನು ನಿಗದಿಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರು ಕರ್ನಾಟಕ ಕಿರಿಯ ವೈದ್ಯರ ಸಂಘವು ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳ ಮಾಸಿಕ ಶಿಷ್ಯ ವೇತನವನ್ನು ಕ್ರಮವಾಗಿ ರೂ. 12,000, ರೂ. 24,000 ಮತ್ತು ರೂ. 30,000 ಗಳಿಗೆ ಪರಿಷ್ಕರಿಸಿ ನಿಗದಿಗೊಳಿಸುವಂತೆ ಮನವಿಯನ್ನು ಸಲ್ಲಿಸಿದ್ದು, ಹಾಲಿ ನೀಡುತ್ತಿರುವ (stipend) ಮತ್ತು ಪರಿಷ್ಕೃತ (stipend) ಪಟ್ಟಿಗಳನ್ನು ಲಗತ್ತಿಸಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಈ ಸಂಸ್ಥೆಯಲ್ಲಿ ಪ್ರಸ್ತುತ ಫೆಲೋಶಿಪ್ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಆಡಳಿತ ಪರಿಷತ್ತಿನ ಅನುಮೋದನೆಯಂತೆ ಮಾಸಿಕ ರೂ. 13,000 ಸ್ಟೈಫಂಡ್‌ನ್ನು ನೀಡಲಾಗುತ್ತಿದೆಯೆಂದು, ಫೆಲೋಶಿಪ್ ವಿದ್ಯಾರ್ಥಿಗಳಿಗೂ ಸಹ ಸೂಪರ್ ಸ್ಪೆಷಾಲಿಟಿ ವಿದ್ಯಾರ್ಥಿಗಳಿಗೆ (ಎಂಸಿಹೆಚ್,ಡಿಎಂ) ನೀಡುವ ರೀತಿಯಲ್ಲಿಯೇ ಶಿಷ್ಯ ವೇತನವನ್ನು ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ/ಫೆಲೋಶಿಪ್ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳ ಮಾಸಿಕ ಶಿಷ್ಯ ವೇತನ (stipend) ವನ್ನು ಕ್ರಮವಾಗಿ ರೂ. 15,000/-

ರೂ. 25,000/– ಮತ್ತು ರೂ. 30,000– ಗಳಿಗೆ ಪರಿಷ್ಕರಿಸಿ ದಿನಾಂಕ 01–11–2011 ರಿಂದ ಜಾರಿಗೆ ಬರುವಂತೆ ನಿಗಧಿಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 89 ಎಂಪಿಎಸ್ 2011, ಬೆಂಗಳೂರು, ದಿನಾಂಕ : 08–11–2011.**

ಗೃಹ ವೈದ್ಯ, ಸ್ನಾತಕೋತ್ತರ ಮತ್ತು ಎಂಸಿಹೆಚ್/ಡಿಎಂ/ಫೆಲೋಶಿಪ್ (ಸೂಪರ್ ಸ್ಪೆಷಾಲಿಟಿ) ವಿದ್ಯಾರ್ಥಿಗಳ ಮಾಸಿಕ ಶಿಷ್ಯ ವೇತನ (stipend) ವನ್ನು ದಿನಾಂಕ 01–11–2011 ರಿಂದ ಜಾರಿಗೆ ಬರುವಂತೆ ಕೆಳಕಂಡಂತೆ ಪರಿಷ್ಕರಿಸಿ ನಿಗಧಿಗೊಳಿಸಲಾಗಿದೆ.

| ವ್ಯಾಸಂಗದ ಹಂತ | ಪ್ರಸ್ತುತ ಇರುವ ದರ | ಪರಿಷ್ಕೃತ ದರ | ಮೊತ್ತ ಅಕ್ಷರಗಳಲ್ಲಿ |
|---|---|---|---|
| ಗೃಹ ವೈದ್ಯ | ರೂ. 8,000 | ರೂ. 15,000 | (ಹದಿನೈದು ಸಾವಿರ ರೂ.ಗಳು ಮಾತ್ರ |
| ಸ್ನಾತಕೋತ್ತರ | ರೂ. 14,000 | ರೂ. 25,000 | (ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) |
| ಎಂಸಿಹೆಚ್/ಡಿಎಂ/ಫೆಲೋಶಿಪ್ (ಸೂಪರ್ ಸ್ಪೆಷಾಲಿಟಿ) | ರೂ. 17,000 | ರೂ. 30,000 | (ಮೂವತ್ತು ಸಾವಿರ ರೂ.ಗಳು ಮಾತ್ರ) |

ಇದಕ್ಕೆ ಸಂಬಂಧಿಸಿದ ಹೆಚ್ಚುವರಿ ವೆಚ್ಚವನ್ನು ಇಲಾಖೆಯ ಆಯವ್ಯಯದ ಉಳಿತಾಯದಿಂದ ಭರಿಸತಕ್ಕದ್ದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1028 ವೆಚ್ಚ–5/2011, ದಿನಾಂಕ 02–09–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ. ಕೆ. ಭೈರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 16 (ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ವಿ. ಆರ್. ನವ್ಯ, ವೈದ್ಯಾಧಿಕಾರಿ, ಸ.ಆ.ಕೇಂದ್ರ, ತಿರುಮಣಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆಂವಿ11/ತು/07/2010–11, ದಿನಾಂಕ 29–11–2010

**ಪ್ರಸ್ತಾವನೆ :**

ಡಾ॥ ವಿ. ಆರ್. ನವ್ಯ, ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಯಾಗಿ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 739 ಹೆಚ್ಎಸ್ಹೆಚ್ 2008, ದಿನಾಂಕ 09–01–2009 ರನ್ವಯ ಸಮುದಾಯ ಆರೋಗ್ಯ ಕೇಂದ್ರ, ತಿರುಮಣಿ, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ ದಿನಾಂಕ 05–03–2009 ರಂದು ಹುದ್ದೆಗೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ 02–04–2009 ರಿಂದ ಅನಧಿಕೃತ ಗೈರು ಹಾಜರಾಗಿದ್ದು, ಸದರಿ ವೈದ್ಯರು ಮನವಿ ಸಲ್ಲಿಸಿ, ಮೂರು ವರ್ಷ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವುದರಿಂದ ಅನುಮತಿ ನೀಡುವಂತೆ ಕೋರಿರುತ್ತಾರೆ. ಆದರೆ, ನೇಮಕಾತಿ ಷರತ್ತಿನನ್ವಯ ಖಾಯಂಪೂರ್ವ ಸೇವಾವಧಿಯಲ್ಲಿ ಸ್ನಾತಕೋತ್ತರ ವ್ಯಾಸಂಗ ನಡೆಸಲು ಅಥವಾ ಮುಂದುವರಿಸಲು ಅವಕಾಶವಿಲ್ಲದಿರುವುದರಿಂದ ಪ್ರೊಬೇಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 738 ಹೆಚ್ಎಸ್ಹೆಚ್ 2010, ಬೆಂಗಳೂರು, ದಿನಾಂಕ : 28–11–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ವಿ. ಆರ್. ನವ್ಯ, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ತಿರುಮಣಿ ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿ ದಿನಾಂಕ 02–04–2009 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ 02–04–2009 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 17 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಸೈಯದಾ ಹೀನಾ ಕೌಸರ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ವಿ.ಕೆ. ಸಲಗರ, ಕರುಣಾ ಟ್ರಸ್ಟ್, ಆಳಂದ ತಾ., ಗುಲ್ಬರ್ಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ/(4ಎ)/65/2010-12, ದಿನಾಂಕ 09-09-2011

**ಪ್ರಸ್ತಾವನೆ :**

ಡಾ॥ ಸೈಯದಾ ಹೀನಾ ಕೌಸರ, ವೈದ್ಯಾಧಿಕಾರಿ, ಇವರು ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾಗಿ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 303 ಹೆಚ್‌ಎಸ್‌ಹೆಚ್ 2010 ದಿನಾಂಕ 10-08-2010 ರನ್ವಯ ಪ್ರಾಥಮಿಕ ಆರೋಗ್ಯ ಕೇಂದ್ರ ವಿ. ಕೆ. ಸಲಗರ, ಕರುಣಾ ಟ್ರಸ್ಟ್, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ ಇಲ್ಲಿ ದಿನಾಂಕ 11-10-2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ವೈದ್ಯರು ದಿನಾಂಕ 03-11-2010 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ನಂತರ ದಿನಾಂಕ 04-06-2011 ರಂದು ಮನವಿ ಸಲ್ಲಿಸಿ, ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುತ್ತಾರೆ. ಆದರೆ ಈ ವೈದ್ಯರು ಖಾಯಂ ಪೂರ್ವ ಸೇವಾವಧಿಯಲ್ಲೇ ಅನಧಿಕೃತ ಗೈರುಹಾಜರಾಗಿರುವುದರಿಂದ ಪ್ರೊಬೆಷನರಿ ನಿಯಮಗಳನ್ವಯ ದಿನಾಂಕ 03-11-2010 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಿಮೋಚನೆಗೊಳಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ವೈದ್ಯರು ರಾಜೀನಾಮೆಯನ್ನು ಸಲ್ಲಿಸಿ ಅಂಗೀಕರಿಸಲು ಕೋರಿರುವುದನ್ನು ಪರಿಗಣಿಸಿ ಕೆಳಕಂಡಂತೆ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಆಕುಕ 392 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ : 29-10-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಸೈಯದಾ ಹೀನಾ ಕೌಸರ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ವಿ.ಕೆ.ಸಲಗರ, ಕರುಣಾ ಟ್ರಸ್ಟ್, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ 03-11-2010 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 18 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## HEALTH & FAMILY WELFARE SECRETARIAT

**Sub :** Deputation of Doctors to One Year Diploma Course in Public Health.

**Read :** Letter No. JRO(M)33/2011-12, dated 01-08-2011 from Commissioner for Health and Family Welfare Services.

**Preamble:**

The Commissioner, Health and Family Welfare Services in his letter read above has requested to accord approval for deputing seven Medical Officers working in Health and Family Department who have been selected for one year Post Graduate Diploma in Public Health Management (PGDPHM) in the year 2011-12 at Indian Institute of Public Health, Hyderabad Government has examined the said proposal and decided to depute the following two doctors who are eligible for such deputation as per Appendix II – A of the Karnataka Civil Services Rules.

Hence the following Order.

**Government Order No. HFW 288 HSH 2011, Bangalore, dated 09-08-2011**

Sanction of Government is accorded for deputation of the following two doctors for undergoing one year Post Graduate Diploma in Public Health Management (PGDPHM) studies at Indian Institute of Public Health, Hyderabad.

1. Dr. Gosbal Ramesh Babu, District Malaria Officer, Bellary
2. Dr. Sanjeev R. Nandre, Medical Officer, Primary Health Centre, Uchgaon, Belgaum District.

This deputation of these officials is subject to following conditions:

a. The fees for this course shall be paid pending approval of central Government to the PIP under NRHM.
b. The deputed officials shall submit an undertaking to serve in the Health and Family Welfare Department, Government of Karnataka for a period of minimum 10 years and not to apply for voluntary retirement after the completion of the Diploma on a signed bond.
c. These doctors will not be deputed to work in other department/board Corporation/Autonomous institute (including Medical Education Department) after the completion of Diploma.
d. The deputed officials shall serve only in the designations posts available in the Health and Family Welfare Department Hospitals and shall not claim new post or designation commensurate with their acquiring PG diploma.
e. The deputed officials shall execute a bond in Form 19 appended to the Karnataka Civil Service Rules before they are relieved of their duties to pursue the Diploma.

The Director, Health and Family Welfare services shall relieve the officials selected for deputation from their duties only after obtaining an affidavit and penalty bond in form 19 as provided in the Karnataka Civil Service Rules incorporating the conditions enumerated above.

This order is issued as per the powers delegated to the Departmental Secretaries in Government Order No. FD 02 SRA 2008, dated 05-06-2008.

By Order and in the name of the Governor of Karnataka
**Chikkegowda**
Under Secretary to Government
Health & Family Welfare Department (Services)

P.R. 19

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2011–12ನೇ ಶೈಕ್ಷಣಿಕ ಸಾಲಿಗೆ ಸರ್ಕಾರಿ/ಅನುದಾನಿತ/ಅನುದಾನರಹಿತ ಆಯುಷ್ ಸ್ನಾತಕೋತ್ತರ ಕೋರ್ಸ್‌ಗಳ ಪ್ರವೇಶಕ್ಕೆ ಸೀಟ್ ಮ್ಯಾಟ್ರಿಕ್ಸ್ ನಿಗಧಿಗೊಳಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 384 ಪಿಟಿಡಿ 2011, ದಿನಾಂಕ 22–10–2011

2) ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/08/ಅಭಿವೃದ್ಧಿ(1)/2011–12, ದಿನಾಂಕ 10–11–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1) ಸರ್ಕಾರಿ ಆದೇಶದಲ್ಲಿ, 2011–12ನೇ ಶೈಕ್ಷಣಿಕ ಸಾಲಿಗೆ ರಾಜ್ಯದಲ್ಲಿನ 02 ಸರ್ಕಾರಿ, 04 ಅನುದಾನಿತ ಹಾಗೂ 10 ಅನುದಾನರಹಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಹಾಗೂ 05 ಅನುದಾನರಹಿತ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಪದವಿ ಕೋರ್ಸಿನ ಪ್ರವೇಶಕ್ಕೆ ಸಂಬಂಧಿಸಿದಂತೆ ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್‌ನ್ನು ನಿಗಧಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರ.ಸಂ. (2)ರ ಆಯುಷ್ ನಿರ್ದೇಶಕರ ಪ್ರಸ್ತಾವನೆಯಲ್ಲಿ ತಾರಾನಾಥ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ ಹಾಗೂ ಆಯುರ್ವೇದ ಮಹಾವಿದ್ಯಾಲಯ, ಬಿಜಾಪುರ ಈ ಎರಡು ಸಂಸ್ಥೆಗಳಿಗೆ 2011–12ನೇ ಶೈಕ್ಷಣಿಕ ಸಾಲಿನಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕೆ ಕೇಂದ್ರ ಸರ್ಕಾರವು ಅನುಮತಿ/ಮಾನ್ಯತೆ ನೀಡಿಲ್ಲದಿರುವ ಹಿನ್ನೆಲೆಯಲ್ಲಿ, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕೇಂದ್ರ ಸರ್ಕಾರದ ಆದೇಶದ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದ ಧಾರವಾಡ ಹಾಗೂ ಗುಲ್ಬರ್ಗಾ ಸಂಚಾರಿ ಪೀಠಗಳಲ್ಲಿ ರಿಟ್ ಅರ್ಜಿಗಳನ್ನು ಸಲ್ಲಿಸಲಾಗಿದೆ ಎಂದು, ನ್ಯಾಯಾಲಯವು ಕೇಂದ್ರ ಸರ್ಕಾರದ ಆದೇಶಕ್ಕೆ ತಡೆಯಾಜ್ಞೆ ನೀಡಿ ಮಧ್ಯಂತರ ಆದೇಶ ನೀಡಿದ ಹಿನ್ನೆಲೆಯಲ್ಲಿ, ತಾರಾನಾಥ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ ಇಲ್ಲಿನ ರಸಶಾಸ್ತ್ರ ಸ್ನಾತಕೋತ್ತರ ಕೋರ್ಸ್‌ನ ತಜ್ಞತೆಯಲ್ಲಿ 07 ಸೀಟುಗಳು ಹಾಗೂ ಆಯುರ್ವೇದ ಮಹಾವಿದ್ಯಾಲಯ, ಬಿಜಾಪುರ ಇಲ್ಲಿನ ರಸಶಾಸ್ತ್ರ ಸ್ನಾತಕೋತ್ತರ ಕೋರ್ಸ್‌ನ ತಜ್ಞತೆಯಲ್ಲಿ 01 ಸೀಟು ಲಭ್ಯವಾಗಿದ್ದು, ಸದರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಲಭ್ಯವಿರುವ ಒಟ್ಟು 08 ಸೀಟುಗಳ ಪ್ರವೇಶಕ್ಕೆ ಅನುಬಂಧ– I & II ರಂತೆ ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್ಸ್‌ಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 384 ಪಿಟಿಡಿ 2011 (ಭಾಗ–1), ಬೆಂಗಳೂರು, ದಿನಾಂಕ : 08–12–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯ ಉಚ್ಚ ನ್ಯಾಯಾಲಯದ ಅಂತಿಮ ಆದೇಶ ಕಾಯ್ದಿರಿಸಿ 2011–12ನೇ ಶೈಕ್ಷಣಿಕ ಸಾಲಿಗೆ ತಾರಾನಾಥ ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬಳ್ಳಾರಿ ಇಲ್ಲಿನ ರಸಶಾಸ್ತ್ರ ಸ್ನಾತಕೋತ್ತರ ಕೋರ್ಸ್‌ನ ತಜ್ಞತೆಯಲ್ಲಿ ಲಭ್ಯವಾಗಿರುವ 07 ಸರ್ಕಾರಿ ಸೀಟುಗಳು ಹಾಗೂ ಆಯುರ್ವೇದ ಮಹಾವಿದ್ಯಾಲಯ, ಬಿಜಾಪುರ ಇಲ್ಲಿನ ರಸಶಾಸ್ತ್ರ ಸ್ನಾತಕೋತ್ತರ ಕೋರ್ಸ್‌ನ ತಜ್ಞತೆಯಲ್ಲಿ ಲಭ್ಯವಾಗಿರುವ 08 ಸರ್ಕಾರಿ ಸೀಟು, ಒಟ್ಟಾರೆ 01 ಸರ್ಕಾರಿ ಸೀಟುಗಳಿಗೆ ನಿಯಮಾನುಸಾರ ಸೀಟುಗಳ ಹಂಚಿಕೆಯನ್ನು ಮಾಡಿ, ಸೀಟ್ ಮ್ಯಾಟ್ರಿಕ್ಸ್ ಹಾಗೂ ರೋಸ್ಟರ್ ಪಾಯಿಂಟ್‌ನ್ನು ಅನುಬಂಧ I & II ರಲ್ಲಿ ನಿಗದಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## Annexure-I

Statement showing the Post Graduate Seats in Government / Aided Private Ayurvedic Medical Colleges for the Academic Year 2011-12

| Sl No. | Subjects | TGAMC BELLARY | | | AMV BIJAPUR | | |
|---|---|---|---|---|---|---|---|
| | | | 1 | | | 2 | |
| | | TS | IS | GS | TS | MS | GS |
| 1 | Dravyaguna | 0 | 0 | 0 | 0 | 0 | 0 |
| 2 | Panchakarma | 0 | 0 | 0 | 0 | 0 | 0 |
| 3 | Shalyatantra | 0 | 0 | 0 | 0 | 0 | 0 |
| 4 | Kayachikitsa | 0 | 0 | 0 | 0 | 0 | 0 |

| | | | | | | | |
|---|---|---|---|---|---|---|---|
| 5 | Shalakyatantra | 0 | 0 | 0 | 0 | 0 | 0 |
| 6 | Rasashastra | 7 | 2 | 5 | 5 | 4 | 1 |
| 7 | Ayurveda Siddantha | 0 | 0 | 0 | 0 | 0 | 0 |
| 8 | Rachana Shareera | 0 | 0 | 0 | 0 | 0 | 0 |
| 9 | Roga Nidhana | 0 | 0 | 0 | 0 | 0 | 0 |
| 10 | Baishajya Kalpana | 0 | 0 | 0 | 0 | 0 | 0 |
| 11 | Parsooti Tantra & Streeroga | 0 | 0 | 0 | 0 | 0 | 0 |
| 12 | Swasthavritha | 0 | 0 | 0 | 0 | 0 | 0 |
| 13 | Ayurveda Samhitha | 0 | 0 | 0 | 0 | 0 | 0 |
| 14 | Koumara Brithya | 0 | 0 | 0 | 0 | 0 | 0 |
| 15 | Manasa Roga | 0 | 0 | 0 | 0 | 0 | 0 |
| 16 | AgadaTantra | 0 | 0 | 0 | 0 | 0 | 0 |
| 17 | Sangyaharana | 0 | 0 | 0 | 0 | 0 | 0 |
| 18 | Kriya Shareera | 0 | 0 | 0 | 0 | 0 | 0 |
| | Total | 7 | 2 | 5 | 5 | 4 | 1 |

TS: Total Seats, IS: Inservice, GS: Government Seats, MS: Management Seats

**R. S. Itagi**
Under Secretary to Government
Health & Family Welfare Department IMD

## Annexure-II

Statement showing the details of seats available for candidates who are born in Karnataka & obtained degree in Karnataka & Classification of Roaster points as per Govt. order No. DPAR/8/SAHI/MA/95, dated 20-06-95 during the academic year 2011-12 in respect of Post Graduate Course in Ayurveda.

| Sl No. | Subject | Seats available for candidate who are born & obtained degree in Karnataka | Last roaster point of 2011-12 | Roaster point for 2011-12 | Name of the colleges & No. of seats available | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Rasashastra | Eight | 17-III A | 18-GM<br>19-III B<br>20-GM<br>21-II A<br>22-GM<br>23-SC | TGAMC Bellary 01<br>TGAMC Bellary 01<br>TGAMC Bellary 01<br>TGAMC Bellary 01<br>TGAMC Bellary 01<br>AVM Bijapur 01<br>**<u>In Service Quota:</u>**<br>TGAMC Bellary 01<br>TGAMC Bellary 01 | |
| | | | | Total | 08 | |

**R. S. Itagi**
Under Secretary to Government
Health & Family Welfare Department IMD

ಪಿ.ಆರ್. 20

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಆಕುಕ 110 ಪಿಟಿಡಿ 2009 (ಭಾಗ–1), ಬೆಂಗಳೂರು, ದಿನಾಂಕ 04–11–2011

ಅಧಿಸೂಚನೆ ಸಂಖ್ಯೆ: HFW 110 PTD 2009, ದಿನಾಂಕ 22–07–2011ರ Schedule-IIರ ಕ್ರಮ ಸಂಖ್ಯೆ 28ರಲ್ಲಿ ನಮೂದಿಸಿರುವ "Dr. Shilpa Shree P.N." ಎಂಬ ಹೆಸರನ್ನು "Dr. Shilpa P.N." ಎಂಬುದಾಗಿ ಹಾಗೂ ಅವರ ಹೆಸರಿನ ಮುಂದೆ ನಮೂದಿಸಿರುವ ಜನ್ಮದಿನಾಂಕವನ್ನು "28–09–79" ರ ಬದಲಾಗಿ "23–09–79" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

ಪಿ. ಆರ್. 21

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ :** 2011-12ನೇ ಸಾಲಿನ ಬೇಡಿಕೆ ಸಂಖ್ಯೆ: 7 ರಡಿಯಲ್ಲಿ ಲೆಕ್ಕ ಶೀರ್ಷಿಕೆ 2515-00-102-0-08 (ಯೋಜನೆ) ಉಪ ಶೀರ್ಷಿಕೆ "101" ಗೆ ಹೆಚ್ಚುವರಿ ಅನುದಾನ "ಅನಸಾರಾಗ್ರಾ.ಸಂಸ್ಥೆ, ಮೈಸೂರು ರಾಜ್ಯ ಗ್ರಾಮೀಣಾಭಿವೃದ್ಧಿ ತರಬೇತಿ ಸಂಸ್ಥೆಗೆ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರ ಪತ್ರ ಸಂಖ್ಯೆ: ರಾಗ್ರಾಸಂ/ಎಸಿಪಿ/ಸಿಆರ್/4/2009-10, ದಿನಾಂಕ 29-6-2011.

**ಪ್ರಸ್ತಾವನೆ :**

ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ 2011-12ನೇ ಸಾಲಿಗೆ ಆವರ್ತಕ ಅನುದಾನವನ್ನಾಗಿ ಲೆಕ್ಕ ಶೀರ್ಷಿಕೆ 2515-00-101-0-08 (ಯೋಜನೆ) ರಡಿ ಸಂಸ್ಥೆಯ ಆಡಳಿತ ನಿರ್ವಹಣೆ ಹಾಗೂ ವೇತನ ಮತ್ತಿತರೆ ಭತ್ಯೆಗಳಿಗೆ ಒಟ್ಟಾರೆ ರೂ. 200.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಅನುದಾನದಲ್ಲಿ ಸಹಾಯಾನುದಾನದ ಉಪ ಲೆಕ್ಕ ಶೀರ್ಷಿಕೆ "101"ರಲ್ಲಿ ರೂ. 57.60 ಲಕ್ಷಗಳನ್ನು ಒದಗಿಸಿದ್ದು, ಇನ್ನುಳಿದ ಅನುದಾನದ ಮೊತ್ತವನ್ನು ವೇತನ ಮತ್ತು ಇತರೆ ಭತ್ಯೆಗಳ ಉಪ ಶೀರ್ಷಿಕೆಯಡಿ ಒದಗಿಸಲಾಗಿರುತ್ತದೆ. ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯು ಸಹಾಯಾನುದಾನದ ಸಂಸ್ಥೆಯಾಗಿದ್ದು ಅನುದಾನದ ಮೊತ್ತವನ್ನು ಪೇಯಿಸ್ ರಸೀದಿ ಮೂಲಕ ಡ್ರಾ ಮಾಡಿಕೊಳ್ಳಬೇಕಾಗಿರುತ್ತದೆ. ಆದರೆ, ಈಗ ಒದಗಿಸಿರುವ ವೇತನ ಮತ್ತು ಇತರೆ ಭತ್ಯೆಗಳ ಅನುದಾನವನ್ನು ಪಡೆದುಕೊಳ್ಳಲು ಸಂಸ್ಥೆಗೆ ಪ್ರತ್ಯೇಕ ಡ್ರಾಯಿಂಗ್ ಕೋಡ್ ಇರುವುದಿಲ್ಲ. ಆದುದರಿಂದ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಮೊತ್ತದ ಸಮಾನ ಪಾಲಿನ ಮೊತ್ತ ರೂ. 104.65 ಲಕ್ಷಗಳನ್ನು ಉಪ ಲೆಕ್ಕ ಶೀರ್ಷಿಕೆ "101" ರಡಿ ಒದಗಿಸುವಂತೆ ಪ್ರಸ್ತಾವನೆಯಲ್ಲಿ ಕೋರಲಾಗಿದೆ.

ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯು ಸಹಾಯಾನುದಾನದ ಸಂಸ್ಥೆಯಾಗಿದ್ದು, ಇದಕ್ಕೆ ಬಿಡುಗಡೆ ಮಾಡುವ ಒಟ್ಟಾರೆ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2515-00-101-0-08 (ಯೋಜನೆ) ರಡಿಯ ಉಪ ಲೆಕ್ಕ ಶೀರ್ಷಿಕೆ "101-ಸಹಾಯಾನುದಾನ" ರಡಿ ಬಿಡುಗಡೆ ಮಾಡಿದರೆ ಸಂಸ್ಥೆಯು ಪೇಯಿಸ್ ರಸೀದಿ ಮೂಲಕ ಡ್ರಾ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಆದ ಕಾರಣ ಉಪ ಲೆಕ್ಕ ಶೀರ್ಷಿಕೆ "101" ರಡಿಗೆ ಈಗಾಗಲೇ ಒದಗಿಸಲಾಗಿರುವ ರೂ. 57.60 ಲಕ್ಷಗಳ ಜೊತೆಗೆ ಹೆಚ್ಚುವರಿಯಾಗಿ ರೂ. 47.05 ಲಕ್ಷಗಳನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿದ್ದು, ಬೇರೆ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಒದಗಿಸಲಾಗಿರುವ ಅನುದಾನದ ಅದ್ಯರ್ಪಣೆ ಮಾಡುವ ಷರತ್ತಿಗೊಳಪಟ್ಟು ಒಟ್ಟಾರೆ ಈ ಉಪ ಲೆಕ್ಕ ಶೀರ್ಷಿಕೆಯಡಿ ರೂ. 104.65 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಈ ಅನುದಾನದ ಮೊತ್ತವನ್ನು ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಗೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಲಾಗಿದೆ.

ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 45 ತಾಪಸ 2011, ಬೆಂಗಳೂರು, ದಿನಾಂಕ : 19-11-2011.**

ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರಿಗೆ 2011-12ನೇ ಸಾಲಿನ ಆವರ್ತಕ ಅನುದಾನವನ್ನಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಬೇಡಿಕೆ ಸಂಖ್ಯೆ: 07ರಡಿ ಲೆಕ್ಕ ಶೀರ್ಷಿಕೆ 2515-00-102-0-08-101 (ಯೋಜನೆ) ರಡಿಯಲ್ಲಿ ಒಟ್ಟಾರೆ ಲಭ್ಯವಾಗುವ ₹104.65 ಲಕ್ಷ (ರೂಪಾಯಿ ಒಂದು ನೂರಾ ನಾಲ್ಕು ಲಕ್ಷ ಅರವತ್ತೈದು ಸಾವಿರ) ಗಳನ್ನು ಬಿಡುಗಡೆ ಮಾಡಲಾಗಿದೆ. ಈ ಮೊತ್ತವನ್ನು ಮಹಾನಿರ್ದೇಶಕರು, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇವರು ಜಿಲ್ಲಾ ಖಜಾನೆಯಿಂದ ಪೇಯಿಸ್ ರಸೀದಿ ಮೇಲೆ ಡ್ರಾ ಮಾಡಿ, ಉಳಿತಾಯ ಖಾತೆಗೆ ಜಮೆ ಮಾಡಿ ನಿಗದಿತ ಉದ್ದೇಶಕ್ಕೆ ಬಳಕೆ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆದೇಶ ಸಂ: ಎಫ್‌ಡಿ/367/ವೆಚ್ಚ-6/2011, ದಿನಾಂಕ 10-11-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪಂ. ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 22

## ತೋಟಗಾರಿಕೆ ಸಚಿವಾಲಯ

**ವಿಷಯ :** ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆಗೆ ಆಡಳಿತಾತ್ಮಕ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಕುಲಸಚಿವರು, ತೋಟಗಾರಿಕೆ ವಿಶ್ವವಿದ್ಯಾನಿಲಯ ಬಾಗಲಕೋಟೆರವರ ಪತ್ರ ಸಂಖ್ಯೆ: R/UHSB/Posts/11/12, ದಿನಾಂಕ 02-09-2011.

**ಪ್ರಸ್ತಾವನೆ :**

ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರು ಮೇಲೆ ಓದಲಾದ ಪತ್ರದಲ್ಲಿ ಬೀದರ್, ಬಾಗಲಕೋಟೆ ಮತ್ತು ಕೋಲಾರ ತೋಟಗಾರಿಕೆ ಮಹಾವಿದ್ಯಾಲಯಗಳಿಗೆ ತಲಾ ಒಂದು ಡೀನ್ ಹುದ್ದೆಗಳನ್ನು ಹಾಗೂ ಕೆಲವು ಮುಖ್ಯ ಆಡಳಿತಾಧಿಕಾರಿ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 346 ತೋಇವಿ 2010 (ಭಾಗ), ಬೆಂಗಳೂರು, ದಿನಾಂಕ 17-11-2011.**

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇಲ್ಲಿ ಹಾಗೂ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿರುವ ತೋಟಗಾರಿಕೆ ಕಾಲೇಜುಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಹಾಗೂ ಭರ್ತಿ ಮಾಡಲು ಅನುಮತಿ ನೀಡಿ ಆದೇಶಿಸಿದೆ

| Sl.No. | Posts | 2011-12 | 2012-13 |
|---|---|---|---|
| 1 | Dean, COH, Bagalkote | 1 (One) | … |
| 2 | Dean, COH, Bidar | 1 (One) | … |
| 3 | Dean, COH, Kolar | 1 (One) | … |
| 4 | Registrar | … | 1 (One) |
| 5 | University Librarian | … | 1 (One) |
| 6 | Comptroller | … | 1 (One) |
| | Total | 3 (Three) | 3 (Three) |

ಮೇಲಿನ ಹುದ್ದೆಗಳಲ್ಲಿ ಕ್ರಮ ಸಂಖ್ಯೆ:5 ಮತ್ತು 6ರಲ್ಲಿನ University Librarian ಮತ್ತು Comptroller ಹುದ್ದೆಗಳಿಗೆ ರಾಜ್ಯ ಸರ್ಕಾರದ ವೇತನ ಶ್ರೇಣಿ ನೀಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 435 ವೆ:4/2011, ದಿನಾಂಕ 03–11–2011ರ ಸಹಮತಿ ಅನ್ವಯ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಪಿ.ಆರ್. 23

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಉದ್ಯೋಗಸ್ಥ ಅಂಗವಿಕಲರ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ರಾಮನಗರ, ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಿಗೆ ವಿಸ್ತರಿಸಿ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಮಮಇ:145:ಪಿಹೆಚ್‌ಪಿ2006(2), ದಿನಾಂಕ: 29/07/2006.
2. ಸರ್ಕಾರದ ಆದೇಶ ಸಂಖ್ಯೆ: ಮಮಇ:325:2006, ದಿನಾಂಕ: 17/03/2007.
3. ಸರ್ಕಾರದ ಆದೇಶ ಸಂಖ್ಯೆ: ಮಮಅ:244:ಪಿಹೆಚ್‌ಪಿ:2006(4), ದಿನಾಂಕ: 25/06/2007.
4. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ:ನಿವಿಹಿಸಇ/ಯೋಜನಾಶಾಖೆ/ಸಿ.9/06/2010–11/1009, ದಿನಾಂಕ: 06/06/2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆಯ ವತಿಯಿಂದ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಕರ್ನಾಟಕ ರಾಜ್ಯದ ಬೆಳಗಾಂ, ಧಾರವಾಡ, ದಾವಣಗೆರೆ, ಚಿತ್ರದುರ್ಗ, ಗುಲ್ಬರ್ಗಾ, ರಾಯಚೂರು, ಬಾಗಲಕೋಟೆ, ಬಿಜಾಪುರ, ಉತ್ತರಕನ್ನಡ, ಕೋಲಾರ, ಹಾಸನ, ತುಮಕೂರು, ಮೈಸೂರು, ಶಿವಮೊಗ್ಗ, ಹಾವೇರಿ, ಗದಗ, ಬಳ್ಳಾರಿ, ಬೆಂಗಳೂರು(ನ), ಬೆಂಗಳೂರು(ಗ್ರಾ), ಮತ್ತು ಬೀದರ್ ಜಿಲ್ಲೆಗಳಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ:(2)ರ ಆದೇಶದಲ್ಲಿ ದಿನಾಂಕ: 29/07/2006ರ ಅನುಬಂಧ–1ರಲ್ಲಿ ಮೊದಲಿದ್ದ ಷರತ್ತು ಮತ್ತು ನಿಬಂಧನೆಗಳನ್ನು ಪರಿಷ್ಕರಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ವತಿಯಿಂದ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಮಂಡ್ಯ, ಚಿಕ್ಕಮಗಳೂರು, ದಕ್ಷಿಣಕನ್ನಡ, ಕೊಡಗು, ಚಾಮರಾಜನಗರ, ಕೊಪ್ಪಳ ಮತ್ತು ಉಡುಪಿ ಜಿಲ್ಲೆಗಳಿಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿದೆ.

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಮೇಲೆ ಓದಲಾದ ಕ್ರಮ ಸಂಖ್ಯೆ:(4)ರ ಪತ್ರದಲ್ಲಿ 2007ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಕೋಲಾರ ಜಿಲ್ಲೆಗಳಿಂದ ವಿಭಜಿಸಿ ಕ್ರಮವಾಗಿ ರಾಮನಗರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳು ಸೃಜನೆಯಾಗಿದ್ದು 2010–11ನೇ ಸಾಲಿನಿಂದ ಗುಲ್ಬರ್ಗ ಜಿಲ್ಲೆಯಿಂದ ವಿಭಜಿಸಿ ಯಾದಗಿರಿ ಜಿಲ್ಲೆಯನ್ನು ಸೃಜಿಸಲಾಗಿದ್ದು, ಬೆಂಗಳೂರು ಗ್ರಾಮಾಂತರ, ಕೋಲಾರ ಹಾಗೂ ಗುಲ್ಬರ್ಗ ಜಿಲ್ಲೆಗಳಲ್ಲಿ ಸ್ಥಾಪಿಸಲಾಗಿದ್ದ ವಸತಿ ನಿಲಯಗಳು ಅದೇ ಜಿಲ್ಲೆಗಳಲ್ಲಿ ಮುಂದುವರೆದಿದ್ದು ವಿಭಜಿತ ರಾಮನಗರ, ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ವಸತಿ ನಿಲಯಗಳು ಇರುವುದಿಲ್ಲವಾದ್ದರಿಂದ ಅಂಗವಿಕಲರ ಮಹಿಳೆಯರನ್ನು ಸಮಾಜದ ಹಾಗೂ ಶಿಕ್ಷಣದ ಮುಖ್ಯವಾಹಿನಿಗೆ ತರುವ ಅಗತ್ಯವಿದ್ದು, ವಿಭಜಿತಗೊಂಡು ಹೊಸದಾಗಿ ರಚನೆಯಾದ ರಾಮನಗರ, ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ವಸತಿ ನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 170 ಪಿಹೆಚ್‌ಪಿ 2011 ಬೆಂಗಳೂರು, ದಿನಾಂಕ: 22/11/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹೊಸದಾಗಿ ರಚಿತವಾಗಿರುವ ರಾಮನಗರ, ಚಿಕ್ಕಬಳ್ಳಾಪುರ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಲೆಕ್ಕಶೀರ್ಷಿಕೆ: 2235–02–101–0–50 (ಯೋಜನೇತರ) ಅಡಿ ಲಭ್ಯವಿರುವ ಅನುದಾನದಲ್ಲಿ ಉದ್ಯೋಗಸ್ಥ ಅಂಗವಿಕಲ ಮಹಿಳೆಯರ ಮತ್ತು

ವಿದ್ಯಾರ್ಥಿನಿಯರ ಮೂರು ವಸತಿ ನಿಲಯಗಳಿಗೆ ತಗಲುವ ವೆಚ್ಚವನ್ನು ಭರಿಸುವ ಷರತ್ತಿಗೆ ಒಳಪಟ್ಟು ಪ್ರಾರಂಭಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಉದ್ಯೋಗಸ್ಥ ಅಂಗವಿಕಲರ ಮಹಿಳೆಯರ ಮತ್ತು ವಿದ್ಯಾರ್ಥಿನಿಯರ ವಸತಿ ನಿಲಯಗಳನ್ನು ಪ್ರಾರಂಭಿಸುವುದಕ್ಕಾಗಿ ಸ್ವಯಂ ಸೇವಾ ಸಂಸ್ಥೆಗಳನ್ನು ಆಯ್ಕೆ ಮಾಡಲು ದಿನಾಂಕ: 29/07/2006 ಹಾಗೂ ದಿನಾಂಕ: 17/03/2007ರ ಸರ್ಕಾರಿ ಆದೇಶದ ಮಾರ್ಗಸೂಚಿ/ಮಾನದಂಡಗಳನ್ನು ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 624 ವೆಚ್ಚ–3/2011, ದಿನಾಂಕ: 19/10/2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಬಿ.ಕಮಲಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 24

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ನೂತನ ಜಿಲ್ಲೆಯಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಗೆ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗೆ ಹುದ್ದೆಗಳ ಸೃಜನೆ ಹಾಗೂ ಭರ್ತಿ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂವಿ 71 ಭೂದಾಪು 2009, ದಿನಾಂಕ: 26/07/2010.
2. ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಪತ್ರ ಸಂಖ್ಯೆ: ನಿಅಕಇ/ಯೋಜನೆ/17/ಹು.ಸೃ/2011–12/342, ದಿನಾಂಕ: 07/05/2011.

**ಪ್ರಸ್ತಾವನೆ :**

ನೂತನವಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗೆ ಅಗತ್ಯ ಹುದ್ದೆಗಳನ್ನು ಸೃಜಿಸುವಂತೆ ಕೋರಿ ನಿರ್ದೇಶಕರು ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ರವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 07/05/2011ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 701 ಎಸ್‌ಜೆಡಿ 2010 ಬೆಂಗಳೂರು, ದಿನಾಂಕ 11–11–2011**

ನೂತನವಾಗಿ ರಚನೆಯಾದ ಯಾದಗಿರಿ ಜಿಲ್ಲೆಯಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯ ಜಿಲ್ಲಾ ಮಟ್ಟದ ಕಛೇರಿಗೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|---|
| 1 | ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿ | ರೂ. 11400–21600 | 1 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 2 | ಯೋಜನಾ ಸಹಾಯಕ | ರೂ. 7275–13350 | 1 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 3 | ಬೆರಳಚ್ಚುಗಾರ | ರೂ. 5800–10550 | 1 | ಹೊರಗುತ್ತಿಗೆ (Out Source) ಆಧಾರದಿಂದ |

ಮೇಲ್ಕಂಡ ಹುದ್ದೆಗಳ ಸೃಜನೆ ಹಾಗೂ ಭರ್ತಿಗೆ ಪ್ರಸ್ತುತ ಜಾರಿಯಲ್ಲಿರುವ ಮಿತವ್ಯಯ ಆದೇಶ ಸಡಿಲಿಸಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 683 ವೆಚ್ಚ–3/11 ದಿ: 28/10/2011ರಲ್ಲಿ ಸಹಮತಿ ನೀಡಿರುತ್ತದೆ. ಅದರನ್ವಯ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 25

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಾಲ್ಯವಿವಾಹ ನಿಷೇಧ ಕಾಯ್ದೆ–2006ನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯದಲ್ಲಿ ಉಸ್ತುವಾರಿ ಕೋಶವನ್ನು ಸ್ಥಾಪಿಸಿ ಹುದ್ದೆಗಳ ಸೃಜನೆ ಹಾಗೂ ಭರ್ತಿ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 170 ಮಮಅ 2006 ದಿ: 22/11/2010
2. ಬಾಲ್ಯ ವಿವಾಹ ತಡೆ ಕೋರ್ ಕಮಿಟಿಯ ಅಂತಿಮ ವರದಿ ದಿ: 30/06/2011
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಏಕಕಡತ ಸಂಖ್ಯೆ: ಮಮಅಇ/ಮಕ/17/2011–12

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ: 22/11/2010ರ ಆದೇಶದಲ್ಲಿ ಬಾಲ್ಯವಿವಾಹ ಕಾಯ್ದೆ 2006ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:11154/2006ರಲ್ಲಿ ನೀಡಿದ ನಿರ್ದೇಶನದಂತೆ ಕ್ರಿಯಾ

ಯೋಜನೆಯನ್ನು ತಯಾರಿಸಲು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಾದ ಜಸ್ಟಿಸ್ ಶಿವರಾಜ್ ವಿ. ಪಾಟೀಲ್ ಇವರ ಅಧ್ಯಕ್ಷತೆಯಲ್ಲಿ ಕೋರ್ ಕಮಿಟಿಯನ್ನು ರಚಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿ: 30/06/2011ರ ಕೋರ್ ಕಮಿಟಿಯ ವರದಿಯಲ್ಲಿ ಬಾಲ್ಯವಿವಾಹವನ್ನು ತಡೆಗಟ್ಟುವ ನಿಟ್ಟಿನಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಸಂಬಂಧಪಟ್ಟ ಇತರೆ ಇಲಾಖೆಗಳು ತೆಗೆದುಕೊಳ್ಳಬೇಕಾದ ಕ್ರಮಗಳು ಹಾಗೂ ಬಾಲ್ಯವಿವಾಹ ನಿಷೇಧ ಕಾಯ್ದೆಯನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯದಲ್ಲಿ ಒಂದು ಉಸ್ತುವಾರಿ ಕೋಶವನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಏಕ ಕಡತದಲ್ಲಿ ನಿರ್ದೇಶನಾಲಯವು ಪ್ರಸ್ತಾವನೆ ಸಲ್ಲಿಸಿ ಪ್ರಸ್ತುತ ಇಲಾಖೆಯಲ್ಲಿರುವ ನಿರ್ದೇಶಕರು ಹಾಗೂ ಜಂಟಿ ನಿರ್ದೇಶಕರು (ಪಿಡಿಎಂ) ಹುದ್ದೆಗಳ ಜೊತೆಗೆ ಈ ಕೆಳಕಂಡ ಹುದ್ದೆಗಳನ್ನು ಉಸ್ತುವಾರಿ ಕೋಶಕ್ಕೆ ಸೃಜಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 501 ಎಸ್‌ಜಿಡಿ 2011 ಬೆಂಗಳೂರು, ದಿನಾಂಕ: 16/11/2011**

ರಾಜ್ಯದಲ್ಲಿ ಬಾಲ್ಯವಿವಾಹ ನಿಷೇಧ ಕಾಯ್ದೆ 2006ನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಉಸ್ತುವಾರಿ ಕೋಶವನ್ನು ಸ್ಥಾಪಿಸಲು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಿ ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಉಪನಿರ್ದೇಶಕರು | 1 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 2 | ಸಹಾಯಕ ನಿರ್ದೇಶಕರು | 1 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 3 | ಪ್ರಥಮ ದರ್ಜೆ ಸಹಾಯಕರು | 2 | ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ |
| 4 | ಗಣಕಯಂತ್ರ ನಿರ್ವಾಹಕರು | 2 | ಹೊರಗುತ್ತಿಗೆ (Out Source) ಆಧಾರದಿಂದ |
| 5 | ಸೇವಕರು | 1 | ಹೊರಗುತ್ತಿಗೆ (Out Source) ಆಧಾರದಿಂದ |

ಮೇಲ್ಕಂಡ ಹುದ್ದೆಗಳ ಸೃಜನೆ ಹಾಗೂ ಭರ್ತಿಗೆ ಪ್ರಸ್ತುತ ಜಾರಿಯಲ್ಲಿರುವ ಮಿತವ್ಯಯ ಆದೇಶ ಸಡಿಲಿಸಿ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 706 ವೆಚ್ಚ–3/11 ದಿ: 03/11/2011 ರಲ್ಲಿ ಸಹಮತಿ ನೀಡಿರುತ್ತದೆ. ಅದರನ್ವಯ ಅದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಪಿ.ಆರ್. 26 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ದಿನಾಂಕ: 20/05/2011
2. ಜಿಲ್ಲಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ: ಎಲ್.ಎ.ಕ್ಯೂ.ಸಿ.ಆರ್. 172/2011 12 ದಿನಾಂಕ: 12/09/2011.
3. ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, (ವಿ) ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಚಾಮುಂಡಿಪುರಂ, ಉಪ ವಿಭಾಗ, ಇವರು ಜಿಲ್ಲಾಧಿಕಾರಿಗಳಿಗೆ ಬರೆದಿರುವ ಪತ್ರ ಸಂಖ್ಯೆ: ಸಕಾಇಂ (ವಿ)/ಸಲೆ/ಚಾಉವಿ/3484, ದಿನಾಂಕ: 03/09/2011.

**ಪ್ರಸ್ತಾವನೆ :**

ಮೈಸೂರು ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರವು ದಿನಾಂಕ: 06/10/2005ರಂದು ಭಾರತ ವಿಮಾನ ನಿಲ್ದಾಣಗಳ ಪ್ರಾಧಿಕಾರದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಅನುಸಾರ ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಳಕೆ ಬಿಲ್ಲನ್ನು ವಿಮಾನಯಾನ ಸೇವೆ ಕಾರ್ಯಾರಂಭಗೊಂಡ ದಿನಾಂಕದಿಂದ 5 ವರ್ಷಗಳ ಅವಧಿಗೆ ರಾಜ್ಯ ಸರ್ಕಾರದಿಂದ ಭರಿಸಬೇಕಾಗಿರುತ್ತದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ.(1)ರ ಆದೇಶದಲ್ಲಿ ನವೆಂಬರ್ 2010 ರಿಂದ ಏಪ್ರಿಲ್ 2011 ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲನ್ನು ಪಾವತಿಸಲು ಬಿಲ್ಲಿನ ಮೊತ್ತ ರೂ. 28,85,360/–ಗಳನ್ನು ಜಿಲ್ಲಾಧಿಕಾರಿಗಳು, ಮೈಸೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ.(2)ರಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಇವರು ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (ವಿ), ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ.(3)ರ ಪತ್ರದಲ್ಲಿ ಕಳುಹಿಸಿರುವ ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಲಗತ್ತಿಸಿ ಮೇ 2011ರಿಂದ ಆಗಸ್ಟ್ 2011ರವರೆಗೆ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ರೂ.17,12,028/–ಗಳನ್ನು ಪಾವತಿಸಲು ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

4. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 48 ರಾಅವಿ 2010, ಬೆಂಗಳೂರು, ದಿನಾಂಕ: 16/11/2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ವಿಮಾನ ನಿಲ್ದಾಣದ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತ ಮೇ 2011 ರಿಂದ ಆಗಸ್ಟ್ 2011 ರವರೆಗೆ ರೂ.15,98,216/– ಗಳನ್ನು (ರೂ. ಹದಿನೈದು ಲಕ್ಷಗಳ ತೊಂಬತ್ತೆಂಟು ಸಾವಿರದ ಎರಡುನೂರು ಹದಿನಾರು ಮಾತ್ರ) ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ಮೈಸೂರು ಇವರಿಗೆ ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು 2011–12ನೇ ಸಾಲಿನ ಲೆಕ್ಕ ಶೀರ್ಷಿಕೆ 5465–01–190–1–05 ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ–211–ಬಂಡವಾಳ ಹೂಡಿಕೆ (ಯೋಜನೆ)–ಯಡಿಯಲ್ಲಿ ಭರಿಸತಕ್ಕದ್ದು.

3. ಈ ಹಣವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು, ಇವರು ಪೇಯೀಸ್ ರಸೀದಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಪಡೆದು ತದನಂತರ ಈ ಮೊತ್ತವನ್ನು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ, ಮೈಸೂರು ಇಲ್ಲಿ ಪಾವತಿಸಿ ಉಪಯೋಗಿತ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 2008 ದಿನಾಂಕ: 16/05/2008 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ಸಂಪತ್‌ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 27

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತದಲ್ಲಿನ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನೆ ಕೋಶದ ಕಾರ್ಯನಿರ್ವಹಣೆಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 22/04/2002
2. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 25/11/2002
3. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 20/02/2003
4. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 18 ರಾಅವಿ 2003, ದಿನಾಂಕ: 28/05/2003
5. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 147 ಮೂಇವಿ 2005, ದಿನಾಂಕ: 18/04/2006
6. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 18 ರಾಅವಿ 2003, ದಿನಾಂಕ: 09/01/2007
7. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 169 ರಾಅವಿ 2008, ದಿನಾಂಕ: 18/12/2008
8. ಸರ್ಕಾರಿ ಆದೇಶ ಸಂಖ್ಯೆ: ಮೂಅಇ 122 ರಾಅವಿ 2010, ದಿನಾಂಕ: 04/03/2011
9. ಡೆಪ್ಯುಟಿ ಜನರಲ್ ಮ್ಯಾನೇಜರ್, ಕೆ.ಎಸ್.ಐ.ಐ.ಡಿ.ಸಿ. ಇವರ ಪತ್ರ ಸಂಖ್ಯೆ:DGM(IPD-I)/1125/ 2011–12, ದಿನಾಂಕ: 17/08/2011
10. ಡೆಪ್ಯುಟಿ ಜನರಲ್ ಮ್ಯಾನೇಜರ್, ಕೆ.ಎಸ್.ಐ.ಐ.ಡಿ.ಸಿ. ಇವರ ಪತ್ರ ಸಂಖ್ಯೆ:DGM(IPD-I)/1454/ 2011–12, ದಿನಾಂಕ: 28/09/2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂ.(1)ರ ದಿನಾಂಕ: 22/04/2002ರ ಆದೇಶದಲ್ಲಿ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನೆ ಜಾರಿಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸಲು ಯೋಜನೆಯ ನೋಡಲ್ ಏಜೆನ್ಸಿಯಾದ ಕೆ.ಎಸ್.ಐ.ಐ.ಡಿ.ಸಿ.ಯಲ್ಲಿ ಬಿ.ಐ.ಎ.ಪಿ ಕೋಶವನ್ನು ಸೃಜಿಸಲಾಯಿತು.

2. ಮೇಲೆ ಓದಲಾದ ಕ್ರಮ ಸಂ.(5)ರಲ್ಲಿನ ಆದೇಶದಲ್ಲಿ 2006–07ನೇ ಸಾಲಿನ ಆರ್ಥಿಕ ವರ್ಷದಲ್ಲಿ ಈ ಯೋಜನೆಯನ್ನು ಮುಂದುವರೆದ ಯೋಜನೆಯೆಂದು ಪರಿಗಣಿಸಿ ಮಂಜೂರಾತಿಯನ್ನು ನೀಡಲಾಗಿದೆ.

3. ಮೇಲೆ ಓದಲಾದ (2) ರಿಂದ (4) ಮತ್ತು (6), (7), (8)ರಲ್ಲಿರುವ ಆದೇಶಗಳಲ್ಲಿ ಈ ಕೋಶದ ಕಾರ್ಯನಿರ್ವಹಣೆಗಾಗಿ ಸರ್ಕಾರವು ಕಾಲಕಾಲಕ್ಕೆ ಹಣವನ್ನು ಬಿಡುಗಡೆ ಮಾಡಿದೆ.

4. ಮೇಲೆ ಓದಲಾದ (9) & (10) ರಲ್ಲಿ ಉಪ ಪ್ರಧಾನ ವ್ಯವಸ್ಥಾಪಕರು (IPD-I) ಕೆ.ಎಸ್.ಐ.ಐ.ಡಿ.ಸಿ. ಬೆಂಗಳೂರು ಇವರು ಬಿ.ಐ.ಎ.ಪಿ ಕೋಶದ ನಿರ್ವಹಣೆಗಾಗಿ 2002–03ನೇ ಸಾಲಿನಿಂದ 2010–11ನೆ ಸಾಲಿನವರೆಗೆ (ಡಿಸೆಂಬರ್ 2010 ರವರೆಗೆ) ರೂ.1,93,90,674.00 ಖರ್ಚು ಮಾಡಲಾಗಿದೆ ಎಂದು ತಿಳಿಸುತ್ತಾ, ಈ ಕೋಶದ ವೆಚ್ಚವನ್ನು ಭರಿಸಲು 2011–12ನೇ ಸಾಲಿಗೆ ರೂ.25.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

5. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 122 ರಾಅವಿ 2010, ಬೆಂಗಳೂರು, ದಿನಾಂಕ: 10/11/2011**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕೆ.ಎಸ್.ಐ.ಐ.ಡಿ.ಸಿ.ಯಲ್ಲಿರುವ ಬಿ.ಐ.ಎ.ಪಿ ಕೋಶದ ಕಾರ್ಯನಿರ್ವಹಣೆಗಾಗಿ 2011–12ನೇ ಆರ್ಥಿಕ ವರ್ಷದಲ್ಲಿ ರೂ.25.00ಲಕ್ಷಗಳನ್ನು (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಕೆಳಕಂಡ ಷರತ್ತುಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿಯನ್ನು ನೀಡಿದೆ:

"ಜನವರಿ 2011 ರಿಂದ ಈವರೆವಿಗೂ ಮಾಡಿರುವ ವೆಚ್ಚಗಳ ವಿವರಗಳನ್ನು ಸರ್ಕಾರಕ್ಕೆ ಒದಗಿಸುವುದು"

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–2–03– ಕೆ.ಎಸ್.ಐ.ಐ.ಡಿ.ಸಿ– ಬಿಐಎಪಿ ಕೋಶ–211 ಹೂಡಿಕೆಗಳು ಇದರಡಿಯಲ್ಲಿ 2011–12ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯದಿಂದ ಭರಿಸತಕ್ಕದ್ದು.

3. ಈ ಹಣವನ್ನು ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಐ.ಐ.ಡಿ.ಸಿ. ಬೆಂಗಳೂರು ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಸರ್ಕಾರದ ಆದೇಶ ಸಂ. FD 1 TFP 2008 ದಿನಾಂಕ: 16/05/2008ರಲ್ಲಿ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಜಿ. ಸಂಪತ್‌ಕಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 28

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ಹಲಗೇರಿ ಹಾಲ್ಕಲ್ ರಸ್ತೆ (ರಾಹೆ–26) ಶ್ರೀ ರಾಘವೇಂದ್ರಸ್ವಾಮಿ ಮಠವನ್ನು ಸಂಪರ್ಕಿಸುವ 0.20 ಕಿ.ಮಿ. ಉದ್ದದ ಗ್ರಾಮೀಣ ರಸ್ತೆಯನ್ನು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಅಭಿವೃದ್ಧಿಪಡಿಸಲು ಒಂದು ಬಾರಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 21–10–2011 ರಂದು ನಡೆದ ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ/ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳನ್ನು ಪರಿಗಣಿಸಲು ರಚಿಸಲಾಗಿರುವ ಸಮಿತಿಯ ಸಭೆ.

**ಪ್ರಸ್ತಾವನೆ :**

ಮೇಲೆ ಓದಲಾದ ಸಮಿತಿಯ ನಡವಳಿಯಲ್ಲಿ ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೂಕು ಹಲಗೇರಿ ಹಾಲ್ಕಲ್ ರಸ್ತೆ (ರಾಹೆ–26) ಶ್ರೀ ರಾಘವೇಂದ್ರಸ್ವಾಮಿ ಮಠವನ್ನು ಸಂಪರ್ಕಿಸುವ 0.20 ಕಿ.ಮೀ. ಉದ್ದದ ಗ್ರಾಮೀಣ ರಸ್ತೆಯನ್ನು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಒಂದು ಬಾರಿ ಅಭಿವೃದ್ಧಿಪಡಿಸಿ ಪುನಃ ಪಂಚಾಯತ್ ರಾಜ್ ಮತ್ತು ಇಂಜಿನಿಯರಿಂಗ್ ಇಲಾಖೆಗೆ ವಾಪಸ್ ನೀಡಲು ಅನುಮೋದಿಸುವ ಬಗ್ಗೆ ಕೂಲಂಕಷವಾಗಿ ಚರ್ಚಿಸಲಾಯಿತು.

ಹಾಲಿ ಈ ರಸ್ತೆಯುನ್ನು ಅಭಿವೃದ್ಧಿಪಡಿಸಲು ರೂ. 15.00 ಲಕ್ಷಗಳ ಅನುದಾನ ಲಭ್ಯವಿರುತ್ತದೆಂದು ಸಮಿತಿಗೆ ತಿಳಿಸಲಾಯಿತು. ಹಾಗೂ ಈ ರಸ್ತೆಯು ದೇವಸ್ಥಾನವನ್ನು ಸಂಪರ್ಕಿಸುವ ರಸ್ತೆಯಾದ್ದರಿಂದ ಜನಸಂಚಾರ ಹೆಚ್ಚಾಗಿದ್ದು, ವಾಹನ ದಟ್ಟಣೆ ಕೂಡ ಹೆಚ್ಚು ಇರುತ್ತದೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಒಂದು ಬಾರಿ ಲೋಕೋಪಯಾಗಿ. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಅಭಿವೃದ್ಧಿಪಡಿಸಿ ನಂತರ ಪಂಚಾಯತ್ ರಾಜ್ ಮತ್ತು ಇಂಜಿನಿಯರಿಂಗ್ ಇಲಾಖೆಗೆ ಹಿಂತಿರುಗಿಸಲು ತೀರ್ಮಾನಿಸಲಾಯಿತು.

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ : ಲೋಇ 509 ಸಿಆರ್‌ಎಂ 2011, ಬೆಂಗಳೂರು, ದಿನಾಂಕ : 18ನೇ ನವೆಂಬರ್ 2011**

ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು ಹಲಗೇರಿ ಹಾಲ್ಕಲ್ ರಸ್ತೆ (ರಾಹೆ–26) ಶ್ರೀ ರಾಘವೇಂದ್ರಸ್ವಾಮಿ ಮಠವನ್ನು ಸಂಪರ್ಕಿಸುವ 0.20 ಕಿ.ಮೀ. ಉದ್ದದ ಗ್ರಾಮೀಣ ರಸ್ತೆಯನ್ನು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಒಂದು ಬಾರಿ ಅಭಿವೃದ್ಧಿಪಡಿಸಿ ಪುನಃ ಪಂಚಾಯತ್ ರಾಜ್ ಮತ್ತು ಇಂಜಿನಿಯರಿಂಗ್ ಇಲಾಖೆಗೆ ವಾಪಸ್ ನೀಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ–1)

ಪಿ.ಆರ್. 29

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕೃಷ್ಣಾಭಾಗ್ಯ ಜಲ ನಿಗಮ ನಿಯಮಿತದಿಂದ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರವಾಗಿರುವ ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕು ಲೋಕೋಪಯೋಗಿ ಇಲಾಖೆಯ ಅಡಿಯಲ್ಲಿ ಬರುವ ಯರಗಟ್ಟಿ – ಬಬಲೇಶ್ವರ ರಾಜ್ಯ ಹೆದ್ದಾರಿ 55ರ ಕಿ.ಮೀ. 74.79 ರಿಂದ 78.29ರ ವರೆಗೆ – 3.50 ಕಿ.ಮಿ. ಉದ್ದದ ರಸ್ತೆಯನ್ನು ಲೋಕೋಪಯೋಗಿ ಇಲಾಖೆ ರಸ್ತೆ ಎಂದು ಪರಿಗಣಿಸಿ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್:ಹೈಲ್ಯಸೇ:ಕ.ಸಂ.7:2:ಅಧಿಸೂಚನೆ:2011–12:2089 ದಿನಾಂಕ: 06–06–2011.

2. ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯದಲ್ಲಿನ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ/ ಕೆಳದರ್ಜೆಗಿಳಿಸುವ ಪ್ರಸ್ತಾವನೆಗಳನ್ನು ಪರಿಗಣಿಸಲು ರಚಿಸಲಾಗಿರುವ ದಿನಾಂಕ: 21–10–2011ರ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಲೋಕೋಪಯೋಗಿ ಇಲಾಖೆಯ ಅಡಿಯಲ್ಲಿ ಬರುವ ಯರಗಟ್ಟಿ – ಬಬಲೇಶ್ವರ ರಾಜ್ಯ ಹೆದ್ದಾರಿ–55ರ

ಕಿ.ಮೀ. 74.79 ರಿಂದ 78.29ರ ವರೆಗೆ ಒಟ್ಟು 3.50 ಕಿ.ಮೀ. ರಸ್ತೆಯನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಇವರು ಅಭಿವೃದ್ಧಿಪಡಿಸಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರ ಮಾಡಿರುವುದಾಗಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಅದರಂತೆ ಓದಲಾದ (2) ರ ಸಮಿತಿಯ ಸಭೆಯಲ್ಲಿ ಕೃಷ್ಣಾಭಾಗ್ಯ ಜಲನಿಗಮ ನಿಯಮಿತದಿಂದ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರವಾಗಿರುವ ರಸ್ತೆಯನ್ನು ಲೋಕೋಪಯೋಗಿ ಇಲಾಖೆಯ ರಸ್ತೆ ಎಂದು ಪರಿಗಣಿಸಿ ಆದೇಶ ಹೊರಡಿಸಲು ಸಮಿತಿಯು ಅನುಮೋದಿಸಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 377 ಸಿಆರ್‌ಎಂ 2011 ಬೆಂಗಳೂರು, ದಿನಾಂಕ : 16ನೇ ನವೆಂಬರ್ 2011**

ಕೃಷ್ಣಾಭಾಗ್ಯ ಜಲ ನಿಗಮ ನಿಯಮಿತದಿಂದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಹಸ್ತಾಂತರವಾಗಿರುವ ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕು ಲೋಕೋಪಯೋಗಿ ಇಲಾಖೆಯಡಿಯಲ್ಲಿ ಬರುವ ಯರಗಟ್ಟಿ – ಬಬಲೇಶ್ವರ ರಾಜ್ಯ ಹೆದ್ದಾರಿ–55ರ ಕಿ.ಮಿ. 74.79 ರಿಂದ 78.29ರ ವರೆಗೆ ಒಟ್ಟು 3.50 ಕಿ.ಮಿ. ಉದ್ದದ ರಸ್ತೆಯನ್ನು ಲೋಕೋಪಯೋಗಿ ಇಲಾಖೆ ರಸ್ತೆ ಎಂದು ಪರಿಗಣಿಸಿ ಸರ್ಕಾರದ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ–1)

ಪಿ.ಆರ್. 30

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ರಾಜ್ಯಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿ ರಚಿಸುವ ಬಗ್ಗೆ.
**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಸಕಇ 28 ಎಸ್‌ಪಿಎ 08 ದಿನಾಂಕ: 17–09–2009.

**ಸರ್ಕಾರದ ಆದೇಶ ಸಂಖ್ಯೆ : ಸಕಇ 33 ಎಸ್‌ಪಿಎ 2011, ಬೆಂಗಳೂರು, ದಿನಾಂಕ : 11ನೇ ನವೆಂಬರ್ 2011**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ (ದೌರ್ಜನ್ಯ ಪ್ರತಿಬಂಧ) ನಿಯಮಾವಳಿ 1995ರ 16ನೇ ನಿಯಮದ ಮೇರೆಗೆ ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿಯನ್ನು ಮೇಲೆ ಓದಲಾದ ಆದೇಶದಲ್ಲಿ ರಚಿಸಲಾಗಿತ್ತು. ಇತ್ತೀಚೆಗೆ ಸರ್ಕಾರ ಬದಲಾದ ಹಿನ್ನೆಲೆಯಲ್ಲಿ ಸದರಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1 | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2 | ಮಾನ್ಯ ಗೃಹ ಸಚಿವರು | ಸದಸ್ಯರು |
| 3 | ಮಾನ್ಯ ಸಮಾಜ ಕಲ್ಯಾಣ ಸಚಿವರು | ಸದಸ್ಯರು |
| 4 | ಮಾನ್ಯ ನಗರಾಭಿವೃದ್ಧಿ ಮತ್ತು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ, ಸಂಸದೀಯ ವ್ಯವಹಾರಗಳ ಸಚಿವರು | ಸದಸ್ಯರು |
| 5 | ಶ್ರೀ ರೇವುನಾಯ್ಕ ಬೆಳಮಗಿ,<br>ಮಾನ್ಯ ಪಶುಸಂಗೋಪನೆ ಮತ್ತು ಮೀನುಗಾರಿಕೆ, ಸಣ್ಣ ಉಳಿತಾಯ ಮತ್ತು ಲಾಟರಿ ಲೋಕಶಿಕ್ಷಣ ಮತ್ತು ಸಾರ್ವಜನಿಕ ಗ್ರಂಥಾಲಯ ಸಚಿವರು | ಸದಸ್ಯರು |
| 6 | ಶ್ರೀ ಗೋವಿಂದ ಎಂ. ಕಾರಜೋಳ,<br>ಮಾನ್ಯ ಸಣ್ಣ ನೀರಾವರಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಜವಳಿ ಸಚಿವರು | ಸದಸ್ಯರು |
| 7 | ಶ್ರೀ ಬಾಲಚಂದ್ರ ಲಕ್ಷ್ಮಣ್‌ರಾವ್ ಜಾರಕಿಹೊಳಿ,<br>ಮಾನ್ಯ ಪೌರಾಡಳಿತ ಮತ್ತು ಸ್ಥಳೀಯ ಸಂಸ್ಥೆಗಳು ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು | ಸದಸ್ಯರು |
| 8 | ಶ್ರೀ ನರಸಿಂಹನಾಯ್ಕ (ರಾಜುಗೌಡ)<br>ಮಾನ್ಯ ಸಣ್ಣ ಕೈಗಾರಿಕಾ ಸಚಿವರು | ಸದಸ್ಯರು |
| 9 | ಶ್ರೀ ಎಂ. ಚಂದ್ರಪ್ಪ,<br>ಮಾನ್ಯ ವಿಧಾನಸಭಾ ಸದಸ್ಯರು, ಹೊಳಲ್ಕರೆ ಕ್ಷೇತ್ರ | ಸದಸ್ಯರು |
| 10 | ಶ್ರೀ ಎನ್.ವೈ. ಗೋಪಾಲಕೃಷ್ಣ,<br>ಮಾನ್ಯ ವಿಧಾನಸಭಾ ಸದಸ್ಯರು, ಮೊಳಕಾಲ್ಮುರು ವಿಧಾನಸಭಾ ಕ್ಷೇತ್ರ | ಸದಸ್ಯರು |
| 11 | ಶ್ರೀ ಸುನೀಲ್ ವಲ್ಲ್ಯಾಪುರ,<br>ಮಾನ್ಯ ವಿಧಾನಸಭಾ ಸದಸ್ಯರು, ಚಿಂಚೋಳಿ ವಿಧಾನಸಭಾ ಕ್ಷೇತ್ರ | ಸದಸ್ಯರು |
| 12 | ಶ್ರೀ ಎಂ. ಬಸವರಾಜ್ ನಾಯ್ಕ,<br>ಮಾನ್ಯ ವಿಧಾನಸಭಾ ಸದಸ್ಯರು, ಮಾಯಕೊಂಡ ವಿಧಾನಸಭಾ ಕ್ಷೇತ್ರ | ಸದಸ್ಯರು |
| 13 | ಶ್ರೀ ರಮೇಶ್ ಜಿಗಜಿಣಗಿ,<br>ಮಾನ್ಯ ಲೋಕಸಭಾ ಸದಸ್ಯರು, ಬಿಜಾಪುರ | ಸದಸ್ಯರು |
| 14 | ಶ್ರೀಮತಿ ಶಾಂತಾ,<br>ಮಾನ್ಯ ಲೋಕಸಭಾ ಸದಸ್ಯರು, ಬಳ್ಳಾರಿ | ಸದಸ್ಯರು |

| | | |
|---|---|---|
| 15 | ಶ್ರೀ ಅರ್. ಧ್ರುವನಾರಾಯಣ,<br>ಮಾನ್ಯ ಲೋಕಸಭಾ ಸದಸ್ಯರು, ಚಾಮರಾಜನಗರ | ಸದಸ್ಯರು |
| 16 | ಶ್ರೀ ವಿ. ಶ್ರೀನಿವಾಸ್‌ಪ್ರಸಾದ್, ನಂಜನಗೂಡು ಕ್ಷೇತ್ರ<br>ಮಾನ್ಯ ವಿಧಾನಸಭಾ ಸದಸ್ಯರು, | ಸದಸ್ಯರು |
| 17 | ಶ್ರೀ ಅಮರೇಶ್,<br>ಮಾನ್ಯ ವಿಧಾನಸಭಾ ಸದಸ್ಯರು, ಮುಳವಾಗಿಲು ವಿಧಾನಸಭಾ ಕ್ಷೇತ್ರ, ಕೋಲಾರ ಜಿಲ್ಲೆ | ಸದಸ್ಯರು |
| 18 | ಶ್ರೀ ಹೆಚ್.ಕೆ. ಕುಮಾರಸ್ವಾಮಿ,<br>ಮಾನ್ಯ ವಿಧಾನಸಭಾ ಸದಸ್ಯರು, ಸಕಲೇಶ್‌ಪುರ ಕ್ಷೇತ್ರ | ಸದಸ್ಯರು |
| 19 | ಶ್ರೀ ಎಸ್. ಚಿಕ್ಕಮಾದು,<br>ಮಾನ್ಯ ವಿಧಾನಪರಿಷತ್ತಿನ ಸದಸ್ಯರು | ಸದಸ್ಯರು |
| 20 | ಶ್ರೀ ಡಿ.ಎಸ್. ವೀರಯ್ಯ,<br>ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 21 | ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ | ಸದಸ್ಯರು |
| 22 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ | ಸದಸ್ಯರು |
| 23 | ಡೈರೆಕ್ಟರ್ ಜನರಲ್ ಅಂಡ್ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು | ಸದಸ್ಯರು |
| 24 | ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 25 | ನಿರ್ದೇಶಕರು, ರಾಷ್ಟ್ರೀಯ ಪರಿಶಿಷ್ಟ ಜಾತಿಗಳ ಆಯೋಗ, (ಕರ್ನಾಟಕ), ಬೆಂಗಳೂರು | ಸದಸ್ಯರು |
| 26 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ | ಸಮಾವೇಶಕರು |

ಸದರಿ ಸಮಿತಿ ಸಭೆಯನ್ನು ವರ್ಷದಲ್ಲಿ ಎರಡು ಬಾರಿ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ (ದೌರ್ಜನ್ಯ ಪ್ರತಿಬಂಧ ಅಧಿನಿಯಮ 1989)ರ ಪ್ರಕಾರ ನಡೆಸಬೇಕಾಗಿದೆ. ವಿವಿಧ ಇಲಾಖೆ ಏಜೆನ್ಸಿಗಳು ಸಂಬಂಧಪಟ್ಟ ಅಧಿನಿಯಮ : ನಿಯಮಗಳನ್ನು ಅನುಷ್ಠಾನಗೊಳಿಸುವ ಮುಖಾಂತರ ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟ ಜಾತಿ ಹಾಗು ಪರಿಶಿಷ್ಟ ಪಂಗಡದ ಜನರ ಹಿತ ರಕ್ಷಿಸುವಲ್ಲಿ ತೆಗೆದುಕೊಂಡ ಕ್ರಮದ ವಿವರ ಪರಿಶೀಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಲೀಲಾವತಿ**

ಸರ್ಕಾರದ ಉಪ ಕಾರ್ಯದರ್ಶಿ–1

ಪಿ.ಆರ್. 31 ಸಮಾಜ ಕಲ್ಯಾಣ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿತ್ರದುರ್ಗ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತನ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ: 07–08–1995
2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರದ ಸಂಖ್ಯೆ: ರಾಕಾ/ನಾನಿ/305/2011 ದಿನಾಂಕ: 04–07–2011.
3. ಮಾನ್ಯ ಮುಖ್ಯಮಂತ್ರಿಯವರು ಸಚಿವಾಲಯದ ಟಿಪ್ಪಣಿ ಸಂಖ್ಯೆ: ಮುಮಂಸ /ಡಿಎಸ್/ 602/ಎನ್‌ಓಎಂ/11, ದಿನಾಂಕ: 07–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2) ರಲ್ಲಿರುವ ಪತ್ರಗಳಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರಗಳಲ್ಲಿನ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (3)ರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲುಕುಗಳಿಗೆ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ, ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 91 ಯೋವಿವಿ 2011 ಬೆಂಗಳೂರು, ದಿನಾಂಕ : 30ನೇ ನವೆಂಬರ್ 2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ಚಿತ್ರದುರ್ಗ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿದೆ.

ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು

| ಕ್ರ.ಸಂ. | ಹೆಸರು | ವರ್ಗ |
|---|---|---|
| 1 | ಶ್ರೀಮತಿ ಲಕ್ಷ್ಮೀ ಕೋ. ಮಲ್ಲಣ್ಣ, ಐ.ಯು.ಡಿ.ಪಿ. ಲೆಔಟ್, 4ನೇ ಅಡ್ಡರಸ್ತೆ, ಚಿತ್ರದುರ್ಗ | ಮಹಿಳೆ |
| 2 | ಶ್ರೀ ಎಸ್.ಎಂ. ಕೊಟ್ರಸ್ವಾಮಿ ಬಿನ್ ಎಸ್.ಎಂ. ಗಂಗಾದರಯ್ಯ, ಚಿಕ್ಕಪ್ಪನಹಳ್ಳಿ ಮಾಡನಾಯ್ಕನಹಳ್ಳಿ ಪೋಸ್ಟ್, ಚಿತ್ರದುರ್ಗ ತಾಲ್ಲೂಕು | ಸಾಮಾನ್ಯ |
| 3 | ಶ್ರೀ ಎಸ್.ಸಿದ್ದಪ್ಪ ಬಿನ್ ಸಿದ್ದಲಿಂಗಪ್ಪ ಜಾನುಕೊಂಡ, ಪಂಡ್ರಹಳ್ಳಿ ಅಂಚೆ, ಚಿತ್ರದುರ್ಗ ತಾಲ್ಲೂಕು | ಸಾಮಾನ್ಯ |
| 4 | ಶ್ರೀ ಬಿ.ಸಿ.ಸುಧಾಕರ ಬಿನ್ ಚಂದ್ರಪ್ಪ ಮೇಗಳಹಳ್ಳಿ, ಕಡ್ಲೇಗುದ್ದು ಅಂಚೆ, ಚಿತ್ರದುರ್ಗ ತಾಲ್ಲೂಕು | ಎಸ್.ಟಿ. |
| 5 | ಶ್ರೀ ಕೆ.ವಿ.ರವಿ ಒಡೆಯರ್ ಬಿನ್ ಕರಿಸಿದ್ದಯ್ಯ ಒಡೆಯರ್, ಸೊಲ್ಲಾಪುರ, ಸಿದ್ದಾಪುರ ಅಂಚೆ, ಚಿತ್ರದುರ್ಗ ತಾಲ್ಲೂಕು | ಬಿ.ಸಿ.ಎಂ. |
| 6 | ಶ್ರೀ ಮಹಮ್ಮದ್ ಮಕ್ಸೂದ್ ಪಾಷಾ ಬಿನ್ ಅಬ್ದುಲ್ ಬಷೀರ್ ಮ್ಯಾಕ್ಸ್ ನೆಟ್‌ವರ್ಲ್ಡ್, ಸೂಪರ್ ಕಾಂಪ್ಲೆಕ್ಸ್ ಪ್ರಸನ್ನ ರಸ್ತೆ ಚಿತ್ರದುರ್ಗ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2,

ಪಿ.ಆರ್. 32 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## HORTICULTURE SECRETARIAT

**Sub :** "Scheme for Integrated Farming in Coconut for Productivity/Improvement with Coconut Development Board Assistance (100%CDB)" – Release of funds-reg.

**Read:**
1) Government Order No. HCD 108 HPP 2011 dated: 12-05-2011
2) Government Order No**.** HCD 208 HPP 2011 dated: 26-07-2011
3) Government Order No. HCD 100 HPP 2011 dated: 28-07-2011
4) CDB letter No. 505/2006- DEV (Karnataka) dated: 01-09-2011
5) CDB letter No. 597/2009- DEV (Karnataka) dated: 03-10-2011
6) Letter of Director of Horticulture No. ತೋಇ/ತೋಬೆ/ಸತೋಅ–2/3/2011-12 dated: 11-11-2011.

**Preamble:**

Sanction had been accorded to the Director of Horticulture to implement the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance/Relief) during 2011-12, Rs. 298,07,628/- (Rs. 7,50,000 = Rs. 264,37,628/- = Rs. 26,20,000) has been released as per Government Orders read at (1), (2) and (3) above.

2. Coconut Development Board vide its letters read at (4) and (5) above has released an amount of Rs. 1,25,000.00 and Rs. 14,00,000.00 to the Secretary, Horticulture through 3 Demand Drafts as detailed below:

| Sl. No. | Scheme | D.D. No. | Date | Amount in Rs. |
|---|---|---|---|---|
| 1 | "Production & Distribution of hybrids/ other local tall seedlings" | 065026 | 01-09-2011 | 1,25,000.00 |
| 2 | "Integrated farming in coconut holdings for productivity improvement- Laying out of demonstration plots" | 065522 | 01-10-2011 | 9,00,000.00 |
| | | 065523 | 01-10-2011 | 5,00,000.00 |
| | Sub Total | | | 14,00,000.00 |
| | **GRAND TOTAL** | | | **15,25,000.00** |

3. The Director of Horticulture has requested to release the said amount and the State share for further utilization as per the letter read at (5) above.

4. Hence this Order:

**Government Order No. HCD 100 HPP 2011 Bangalore, Dated 5th December 2011**

Government sanction is hereby accorded to release an amount of Rs.16,50,000.00 (Rupees Sixteen Lakhs Fifty Thousand only) to the Director of Horticulture under the "Scheme for Integrated Farming in Coconut for Productivity/ Improvement in the State" during 2011-12 under the Head of Account 2401-00-108-2-35-100 (Financial Assistance/ Relief) towards Coconut Development Board share and State share as detailed below:

| Sl. | Scheme | Amount in Rs. |
|---|---|---|
| 1 | "Integrated farming in coconut holdings for productivity improvement in Karnataka State – Laying out of demonstration plots" (100%) | 14,00,000.00 |
| 2 | "Production & Distribution of hybrids/ other local tall seedlings" | 1,25,000.00 |
| 3 | State Share | 1,25,000.00 |
| | GRAND TOTAL | 16,50,000.00 |

2. This order is issued with the concurrence by the Internal Financial Advisor, Agriculture and Horticulture Department vide Note: ಕೃತೋಇ 11 ಆಂಆಸ 2011 dated: 29-11-2011

By Order and in the name of the Governor of Karnataka,

**B.C.PRAKASH**

Under Secretary to Government,

Horticuture Department.

PR. 33

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿಕ್ಕಬಳ್ಳಾಪುರ ಜಿಲ್ಲೆ ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ: 07–08–1995.

2. ಶ್ರೀ ಕೆ.ಎಸ್. ಈಶ್ವರಪ್ಪ, ರಾಜ್ಯಾಧ್ಯಕ್ಷರು, ಭಾ.ಜ.ಪ. ಇವರ ಪತ್ರ ಸಂಖ್ಯೆ: ರಾಕಾ/ನಾನಿ/420/2011, ದಿನಾಂಕ: 20–09–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 07–09–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಚಿಕ್ಕಬಳ್ಳಾಪುರ ಜಿಲ್ಲೆಯ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತನ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಸರ್ಕಾರ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 64 ಯೋವಿವಿ 2009(ಭಾ) ಬೆಂಗಳೂರು, ದಿನಾಂಕ : 18ನೇ ನವೆಂಬರ್ 2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ ಯೋಇ 64 ಯೋವಿವಿ 2009 (ಭಾ) ದಿನಾಂಕ: 22–06–2010ರಂದು ಹೊರಡಿಸಿರುವ ಆದೇಶದ ಕ್ರಮಸಂಖ್ಯೆ 4ರ ಶ್ರೀ ಪಿ.ವಿ. ನಾಗರಾಜ್ ಬಿನ್ ಪಿ.ವೀರಪ್ಪ, ಅನೂರು, ತಿಪ್ಪೇನಹಳ್ಳಿ ಅಂಚೆ, ಶಿಡ್ಲಘಟ್ಟ ತಾಲ್ಲೂಕು ಇವರ ನಾಮ ನಿರ್ದೇಶನವನ್ನು ರದ್ದುಗೊಳಿಸಿ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಸರ್ಕಾರ ಈ ಆದೇಶವನ್ನು ಹೊರಡಿಸಿದೆ. ಕೆಡಿಪಿ ಸಮಿತಿಗೆ ಶ್ರೀ ಪಿ.ವಿ. ನಾಗರಾಜು, ಅನೂರು, ಶಿಡ್ಲಘಟ್ಟ ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ, ಇವರ ಸದಸ್ಯತ್ವವನ್ನು ರದ್ದುಗೊಳಿಸಿ ಸದರಿಯವರ ಬದಲಾಗಿ ಈ ಕೆಳಕಂಡ ಹೆಸರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತನ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಚಿಕ್ಕಬಳ್ಳಾಪುರ ಜಿಲ್ಲೆ: ಕೆಡಿಪಿ ಸದಸ್ಯರು**

| ಕ್ರ.ಸಂ. | ಈ ಮೊದಲು ಇದ್ದ ಸದಸ್ಯರ ವಿವರ | ನಾಮಕರಣ ಮಾಡಬೇಕಾದ ಸದಸ್ಯರ ವಿವರ | ವರ್ಗ |
|---|---|---|---|
| 1 | ಶ್ರೀ ಪಿ.ವಿ. ನಾಗರಾಜು, ಬಿನ್ ಪಿ. ವೀರಪ್ಪ ಅನೂರು, ತಿಪ್ಪೇನಹಳ್ಳಿ ಅಂಚೆ, ಶಿಡ್ಲಘಟ್ಟ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | 1) ಶ್ರೀ ಎಂ.ಕೆ. ಗಿರೀಶ್ ಬಿನ್ ಎನ್. ಮುನಿಯಪ್ಪ ಮಳ್ಳೂರು ಗ್ರಾಮ, ಶಿಡ್ಲಘಟ್ಟ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1 ಮತ್ತು 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 34

## ಕೃಷಿ ಸಚಿವಾಲಯ

**ವಿಷಯ :** ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿನ ವಿದ್ಯಾಸಂಸ್ಥೆಗಳಲ್ಲಿ ಡಿಪ್ಲೊಮಾ ಮತ್ತು ಸರ್ಟಿಫಿಕೇಟ್ ಕೋರ್ಸ್‌ಗಳನ್ನು ಪ್ರಾರಂಭಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 24–02–2011ರಂದು ಮಾಡಿದ ಕೃಷಿ ಆಯವ್ಯಯ ಭಾಷಣ.

**2.** (1) ಬೆಂಗಳೂರು, (2) ಧಾರವಾಡ ಮತ್ತು (3) ರಾಯಚೂರು ಕೃಷಿ ವಿಶ್ವವಿದ್ಯಾಲಯಗಳು ಸಲ್ಲಿಸಿರುವ ದಿನಾಂಕ: 19–05–2011, ದಿನಾಂಕ: 23–05–2011 ಮತ್ತು 23–05–2011ರ ಪ್ರಸ್ತಾವನೆಗಳು.

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು ಮೇಲೆ–1ರಲ್ಲಿ ಓದಲಾದ ದಿನಾಂಕ: 24–02–2011ರಂದು ಮಾಡಿದ ಕೃಷಿ ಆಯವ್ಯಯ ಭಾಷಣ ಕಂಡಿಕೆ–4/ರಲ್ಲಿ ಕೃಷಿ, ತೋಟಗಾರಿಕೆ, ಪಶುಪಾಲನೆ ಹಾಗೂ ಮೀನುಗಾರಿಕೆ ವಿಷಯಗಳಲ್ಲಿ ಡಿಪ್ಲೋಮಾ ಮತ್ತು ಸರ್ಟಿಫಿಕೇಟ್ ಕೋರ್ಸ್‌ಗಳನ್ನು

2011–12ನೇ ಸಾಲಿನಿಂದಲೇ ಪ್ರಾರಂಭಿಸುವುದಾಗಿ ಘೋಷಿಸಿದ್ದಾರೆ. ಸದರಿ ಡಿಪ್ಲೊಮಾ ಮತ್ತು ಸರ್ಟಿಫಿಕೇಟ್ ಕೋರ್ಸ್‌ಗಳನ್ನು ಪ್ರಾರಂಭಿಸುವ ಬಗ್ಗೆ ಮೇಲೆ–2ರಲ್ಲಿ ಓದಲಾದ ಪತ್ರಗಳಂತೆ ಬೆಂಗಳೂರು ಧಾರವಾಡ ಮತ್ತು ರಾಯಚೂರು ಕೃಷಿ ವಿಶ್ವವಿದ್ಯಾಲಯಗಳಿಂದ ವಿವರವಾದ ಮಾಹಿತಿ ಮತ್ತು ಪ್ರಸ್ತಾವನೆಗಳನ್ನು ಪಡೆದು ಪರಿಶೀಲಿಸಲಾಗಿದೆ.

ಪ್ರಸ್ತಾವನೆಯ ಬಗ್ಗೆ ಯೋಜನಾ ಇಲಾಖೆಯು ದಿನಾಂಕ: 24–06–2011ರಂದು ತನ್ನ ಸಹಮತಿಯನ್ನು ನೀಡಿದೆ. ಅಂತೆಯೇ ಆರ್ಥಿಕ ಇಲಾಖೆಯೂ ದಿನಾಂಕ: 28–07–2011ರಂದು ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಪೂರಕ ಆಯವ್ಯಯ–2ರಲ್ಲಿ ಭರಿಸುವ ಷರತ್ತಿಗೆ ಒಳಪಟ್ಟು ತನ್ನ ಅನುಮೊದನೆಯನ್ನು ನೀಡಿದೆ. ಮುಂದುವರೆದು ತಕ್ಷಣದ ವೆಚ್ಚದ ಉದ್ದೇಶಗಳಿಗಾಗಿ ಆಯವ್ಯಯದ ಯೋಜನಾ ಅನುದಾನದಲ್ಲಿ ಲಭ್ಯವಿರುವ ಮೊತ್ತದಿಂದ ಭರಿಸುವ ಬಗ್ಗೆ ಪರಿಶೀಲಿಸುವಂತೆಯೂ ತಿಳಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕೃಇ 120 ಕೃವಿವಿ 2011, ಬೆಂಗಳೂರು, ದಿನಾಂಕ : 22–11–2011.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಮೇರೆಗೆ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ಒಳಪಟ್ಟ ವಿ.ಸಿ. ಫಾರಂ (ಕೃಷಿ ಮಹಾವಿದ್ಯಾಲಯ, ಮಂಡ್ಯ ಜಿಲ್ಲೆ) ಮತ್ತು ಕತ್ತಲಗಿ (ಕೃಷಿ ಸಂಶೋಧನಾ ಕೇಂದ್ರ, ದಾವಣಗೆರೆ ಜಿಲ್ಲೆ), ಧಾರವಾಡ ಕೃಷಿ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ಒಳಪಟ್ಟ ಧಾರವಾಡ, ಬಿಜಾಪುರ, ಶಿರಸಿ, ಬಾಗಲಕೋಟೆ, ಬೇಳಗಾವಿ ಮತ್ತು ಹಾವೇರಿ ಜಿಲ್ಲೆ ಹಾಗೂ ರಾಯಚೂರು ಕೃಷಿ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ಒಳಪಟ್ಟ ರಾಯಚೂರು (ಕೃಷಿ ಮಹಾವಿದ್ಯಾಲಯ, ಮತ್ತು ಕೃಷಿ ತಾಂತ್ರಿಕ ಮಹಾವಿದ್ಯಾಲಯ) ಮತ್ತು ಭೀಮರಾಯನಗುಡಿಯಲ್ಲಿ (ಕೃಷಿ ಮಹಾವಿದ್ಯಾಲಯ, ಶಹಪುರ ತಾಲ್ಲೂಕು) 2011–12ನೇ ಸಾಲಿನಿಂದ 2 ವರ್ಷಗಳ ಕೃಷಿಯಲ್ಲಿ ಡಿಪ್ಲೊಮಾ ಮತ್ತು 6 ತಿಂಗಳುಗಳ ಅವಧಿಯಲ್ಲಿ ಸರ್ಟಿಫಿಕೇಟ್ ಕೋರ್ಸ್‌ಗಳನ್ನು ಪ್ರಾರಂಭಿಸಲು ಅನುಮತಿಯನ್ನು ನೀಡಲಾಗಿದೆ.

ಮೇಲ್ಕಂಡ ಡಿಪ್ಲೊಮಾ ಮತ್ತು ಸರ್ಟಿಫಕೇಟ್ ಕೋರ್ಸ್‌ಗಳನ್ನು 2011–12ನೇ ಸಲಿನಿಂದ ಪ್ರಾರಂಭಿಸಲು ಮೂರು ಕೃಷಿ ವಿಶ್ವವಿದ್ಯಾಲಯಗಳಿಗೆ 2011–12ನೇ ಸಾಲಿನಲ್ಲಿ ರೂ. 15.00 ಕೋಟಿ ಒದಗಿಸಲಾಗಿದೆ. ರೂ. 15.00 ಕೋಟಿಗಳನ್ನು 2012–13ನೇ ಸಾಲಿಗೆ ನಿಗದಿಪಡಿಸಿದ್ದು ಆ ಹಣ ಮುಂದಿನ ವರ್ಷದಲ್ಲಿ ತೆಗೆದುಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಅವಶ್ಯಕತೆ ಆಧಾರದ ಮೇಲೆ ಬಿಡುಗಡೆ ಮಾಡಲಾಗುವುದು. ಪ್ರಸ್ತುತ 2011–12ನೇ ಸಾಲಿನಲ್ಲಿ ಆಯಾ ವಿದ್ಯಾಸಂಸ್ಥೆಗಳಲ್ಲಿ ಪ್ರವೇಶಾವಕಾಶಕ್ಕೆ ನಿಗದಿಪಡಿಸಿರುವ ವಿದ್ಯಾರ್ಥಿಗಳ ಸಂಖ್ಯೆಯಂತೆ, ಪ್ರತಿಯೊಬ್ಬ ವಿದ್ಯಾರ್ಥಿಗೆ ಮಾಸಿಕ ರೂ. 1000/–ದಂತೆ ವಿದ್ಯಾರ್ಥಿ ವೇತನ ನೀಡತಕ್ಕದ್ದು. ಬೋಧಕ ಮತ್ತು ಭೋಧಕೇತರ ಸಿಬ್ಬಂದಿಯ ವೇತನ ಇತ್ಯಾದಿ, ಕಟ್ಟಡ, ಪೀಠೋಪಕರಣ ಮುಂತಾದ ಸ್ಥಿರ ಹಾಗೂ ಪುನರಾವರ್ತಿತ ವೆಚ್ಚಗಳನ್ನು ಭರಿಸುವ ಸಲುವಾಗಿ ಅಗತ್ಯವಾದ ಅನುದಾನವನ್ನು ಅನುಬಂಧ–1ರಲ್ಲಿ ಗುರುತಿಸಿದ್ದು ಶೀಘ್ರವಾಗಿ ಬಿಡುಗಡೆ ಮಾಡಲಾಗುವುದು. ಇದನ್ನು ಅವಶ್ಯಕತೆ ಗಮನಿಸಿ, ಪೂರ್ವಭಾವಿಯಾಗಿ ಯೋಜಿಸಿ, ಖರ್ಚು ಮಾಡತಕ್ಕದ್ದು. ಸ್ಥಿರ ವೆಚ್ಚವನ್ನು ಒಮ್ಮೆ ಮಾತ್ರ ಅನುದಾನವಾಗಿ 2011–12ನೇ ಸಾಲಿಗೆ ನೀಡಲಾಗಿದೆ.

ಪ್ರಸ್ತುತ ಸಾಲಿನ ಅಯವ್ಯಯದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯಕ್ಕೆ ರೂ. 498.63 ಲಕ್ಷಗಳು, ಧಾರವಾಡ ಕೃಷಿ ವಿಶ್ವವಿದ್ಯಾಲಯಕ್ಕೆ ರೂ. 488.60 ಲಕ್ಷಗಳು ಮತ್ತು ರಾಯಚೂರು ಕೃಷಿ ವಿಶ್ವವಿದ್ಯಾಲಯಕ್ಕೆ ರೂ. 493.20 ಲಕ್ಷಗಳಂತೆ ಹಂಚಿಕೆ ಮಾಡಿದ್ದು ಈ ಮೊತ್ತವನ್ನು ಲಭ್ಯವಿರುವ ಯೋಜನಾ ಅನುದಾನದಿಂದ ಬಿಡುಗಡೆ ಮಾಡಬೇಕಾಗುತ್ತದೆ.

ಈ ಆದೇಶವನ್ನು ದಿನಾಂಕ: 24–06–2011ರ ಟಿಪ್ಪಣಿ ಸಂಖ್ಯೆ: ಪಿಡಿ 47 ಪಿಎಫ್ಓ 2011ರಲ್ಲಿ ಯೋಜನೆ, ಕಾರ್ಯಕ್ರಮ ನಿರ್ವಹಣೆ ಮತ್ತು ಸಾಂಖ್ಯಿಕ ಇಲಾಖೆಯು ಮತ್ತು ದಿನಾಂಕ: 28–07–2011ರ ಟಿಪ್ಪಣಿ ಸಂಖ್ಯೆ: ಎಫ್‌ಡಿ 284ವ–4/2011ರಲ್ಲಿ ಅರ್ಥಿಕ ಇಲಾಖೆಯು ನೀಡಿರುವ ಅಭಿಪ್ರಾಯ ಹಾಗೂ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ್ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಸೇವೆಗಳು)

## ANNEXURE

**BREAKUP FOR RS. 15.00 CRORES**

**MAXIMUM OF RS. 5.00 CRORES FOR EACH UNIVERSITY**

| Name of the Agricultural University | Stipend | Non-Recurring | Recurring | Total |
|---|---|---|---|---|
| Bangalore | 48.63 | 350.00 | 100.00 | 498.63 |
| Dharwad | 63.60 | 325.00 | 100.00 | 488.60 |
| Raichur | 43.20 | 350.00 | 100.00 | 493.20 |
| Total | 155.43 | 1025.00 | 300.00 | 1480.43 |

**ಮಂಜುನಾಥ್ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಸೇವೆಗಳು)

ಪಿ.ಆರ್. 35

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** 2010ನೇ ಸಾಲಿನ **"ಬಸವ ಪುರಸ್ಕಾರ ಪ್ರಶಸ್ತಿ"** ನೀಡುವ ಕುರಿತು

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 389 ಕಸಧ 2010 ದಿನಾಂಕ: 24-08-2011

2. ಕನ್ನಡ ಮತ್ತು ಸಂಸ್ಕೃತಿ ಆಯುಕ್ತರ ಅ.ಸ.ಪತ್ರ ಸಂಖ್ಯೆ: ಕಸನಿ/23/ಬ.ಪು/2010-11, ದಿನಾಂಕ: 24-10-2011.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ 2010ನೇ ಸಾಲಿನ **"ಬಸವ ಪುರಸ್ಕಾರ ಪ್ರಶಸ್ತಿ"** ಗೆ ಅರ್ಹರಾದವರನ್ನು ಆಯ್ಕೆ ಮಾಡಲು ಡಾ: ಎಂ.ಎಂ. ಕಲಬುರ್ಗಿ ರವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು. ಆಯ್ಕೆ ಸಮಿತಿಯು ದಿನಾಂಕ: 23-09-2011 ಮತ್ತು 21-10-2011 ರಂದು ಸಭೆ ಸೇರಿ, 2010ನೇ ಸಾಲಿನ **"ಬಸವ ಪುರಸ್ಕಾರ ಪ್ರಶಸ್ತಿ"** ಗೆ ಸಮಾಜಿಕ ಸೇವಾ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ **ಶ್ರೀಮತಿ ಮೇಧಾ ಪಾಟ್ಕರ್** ಇವರನ್ನು ಆಯ್ಕೆ ಮಾಡಿದ್ದು. ಈ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಓದಲಾದ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 1262 ಕಸಧ 2011, ಬೆಂಗಳೂರು, ದಿನಾಂಕ : 03-12-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010ನೇ ಸಾಲಿನ **"ಬಸವ ಪುರಸ್ಕಾರ ಪ್ರಶಸ್ತಿ"** ಯನ್ನು **ಶ್ರೀಮತಿ ಮೇಧಾ ಪಾಟ್ಕರ್** ಇವರಿಗೆ ನೀಡಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಇಲಾಖೆ

ಪಿ.ಆರ್. 36

## ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಶ್ರೀರಂಗಪಟ್ಟಣ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಲಾದ ತಜ್ಞರ ಸಮಿತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 39 ಕೆಎಂಯು 2004, ದಿನಾಂಕ: 25-01-2005.

2. ಸರ್ಕಾರದ ಆದೇಶ ಸಂಖ್ಯೆ: ಸಂಕಇ 245 ಕೆಎಂಯು 2005, ದಿನಾಂಕ: 9-1-2006.

3. ಆಯುಕ್ತರು ಪ್ರಾಚ್ಯವಸ್ತು: ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ರವರ ದಿನಾಂಕ 08-12-2010 ರಂದು ಕೊನೆಗೊಂಡ ಪತ್ರ ಸಂ: ಅಪ್ರಾಸಂಪ/ಮೈ- ಶ್ರೀ.ತ.ಸ/2010-11 19.

**ಪ್ರಸ್ತಾವನೆ :**

ಮೈಸೂರು ಮತ್ತು ಶ್ರೀರಂಗಪಟ್ಟಣ ನಗರಗಳಿಗೆ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆ ಕುರಿತಂತೆ ತಜ್ಞರ ಸಮಿತಿಯನ್ನು ದಿನಾಂಕ: 25-1-2005 ರಿಂದ ಒಂದು ವರ್ಷದ ಅವಧಿಗೆ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಲಾಗಿತ್ತು. ಸದರಿ ಸಮಿತಿಯನ್ನು ದಿನಾಂಕ: 25-1-2006 ರಿಂದ ದಿನಾಂಕ: 25-01-2008 ರವರೆಗೆ ಎರಡು ವರ್ಷಗಳ ಅವಧಿಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿಸಲಾಗಿತ್ತು.

ಮೈಸೂರು- ಶ್ರೀರಂಗಪಟ್ಟಣ ನಗರಗಳಿಗೆ ಸಂಬಂದಿಸಿದಂತೆ ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಪ್ರತ್ಯೇಕ ತಜ್ಞರ ಸಮಿತಿಯನ್ನು ರಚಿಸುವಂತೆ ಸದಸ್ಯರುಗಳ ಪಟ್ಟಿಯೊಂದಿಗೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 80 ಕೆಎಂಯು 2010(2), ಬೆಂಗಳೂರು, ದಿನಾಂಕ : 22-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀರಂಗಪಟ್ಟಣ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಅನುಬಂಧದಲ್ಲಿ ಕಾಣಿಸಿರುವ ಸದಸ್ಯನ್ನೊಳಗೊಂಡ ತಜ್ಞರ ಸಮಿತಿಯನ್ನು ಪುನರ್ ರಚಿಸಿ ಸಮಿತಿಯ ಅವಧಿಯನ್ನು ದಿನಾಂಕ 25-1-2008 ರಿಂದ 31-03-2012ರವರೆಗೆ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ

(ಆಡಳಿತ ಕನ್ನಡ)

**ದಿನಾಂಕ: 22–11–2011ರ ಆದೇಶ ಸಂಖ್ಯೆ: ಕಸಂವಾಪ್ರ 80 ಕೆಎಂಯು 2010 (2)ಕ್ಕೆ**
**ಅನುಬಂಧ**

| ಕ್ರಮ ಸಂಖ್ಯೆ | ಅಧಿಕಾರಿ/ಅಧಿಕಾರೇತರ ಸದಸ್ಯರ ಹೆಸರು | ಹುದ್ದೆ |
|---|---|---|
| 1. | ಜಿಲ್ಲಾಧಿಕಾರಿಗಳು,<br>ಮಂಡ್ಯ ಜಿಲ್ಲೆ, ಮಂಡ್ಯ | ಅಧ್ಯಕ್ಷರು |
| 2. | ಆಯುಕ್ತರು,<br>ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ವೆಂಕಟಪ್ಪ ಚಿತ್ರಶಾಲೆ, ಕಸ್ತೂರ್ ಬಾ ರಸ್ತೆ, ಬೆಂಗಳೂರು–560 001 | ಉಪಾಧ್ಯಕ್ಷರು |
| 3. | ಮುಖ್ಯ ಕಾರ್ಯನಿರ್ವಣಾಧಿಕಾರಿಗಳು<br>ಜಿಲ್ಲಾ ಪಂಚಾಯತ್, ಮಂಡ್ಯ ಜಿಲ್ಲೆ, ಮಂಡ್ಯ | ಸದಸ್ಯರು |
| 4 | ಸೂಪರಿಂಟೆಂಡೆಂಟ್ ಆಫ್ ಪೊಲೀಸ್<br>ಮಂಡ್ಯ ಜಿಲ್ಲೆ, ಮಂಡ್ಯ | ಸದಸ್ಯರು |
| 5 | ನಿರ್ದೇಶಕರು, ಪ್ರಾಚ್ಯವಸ್ತು, ಸಂಗ್ರಹಾಲಗಳ ನಿರ್ದೇಶನಾಲಯ, ದಸರಾ ವಸ್ತುಪ್ರದರ್ಶನ ಅವರಣ, ದೊಡ್ಡಕೆರೆ ಮೈದಾನ, ಮೈಸೂರು–570 010 | ಸದಸ್ಯರು |
| 6 | ತಹಸೀಲ್ದಾರ್<br>ಶ್ರೀರಂಗಪಟ್ಟಣ ತಾಲ್ಲೂಕು, ಶ್ರೀರಂಗಪಟ್ಟಣ | ಸದಸ್ಯರು |
| 7 | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ,<br>ಶ್ರೀರಂಗಪಟ್ಟಣ ಉಪ ವಿಭಾಗ, ಶ್ರೀರಂಗಪಟ್ಟಣ | ಸದಸ್ಯರು |
| 8 | ಮುಖ್ಯಾಧಿಕಾರಿಗಳು,<br>ಪುರಸಭೆ, ಶ್ರೀರಂಗಪಟ್ಟಣ | ಸದಸ್ಯರು |
| 9 | ಕಾರ್ಯನಿರ್ವಹಣಾಧಿಕಾರಿ,<br>ಶ್ರೀರಂಗನಾಥಸ್ವಾಮಿ ದೇವಸ್ಥಾನ, ಶ್ರೀರಂಗಪಟ್ಟಣ | ಸದಸ್ಯರು |
| 10 | ಸಹಾಯಕ ಪುರಾತತ್ವ ಅಧೀಕ್ಷಕರು,<br>ಕೇಂದ್ರ ಪುರಾತತ್ವ ಸರ್ವೇಕ್ಷಣೆ, ಭಾರತ ಸರ್ಕಾರ, ದರಿಯಾ ದೌಲತ್ ಭಾಗ, ಶ್ರೀರಂಗಪಟ್ಟಣ | ಸದಸ್ಯರು |
| 11 | ಕರೀಮುದ್ದೀನ್<br>ನಿವೃತ್ತ ಪ್ರಾಧ್ಯಪಕರು, ಗಂಜಾಂ, ಶ್ರೀರಂಗಪಟ್ಟಣ | ಸದಸ್ಯರು |
| 12 | ಶ್ರೀ ರವೀಂದ್ರ ಗುಂಡೂರಾವ್,<br>ವಾಸ್ತುಶಿಲ್ಪ ಸಂರಕ್ಷಕರು<br>ಎ–5, ಹೇಮಾವತಿ ಅಪಾರ್ಟ್‌ಮೆಂಟ್ಸ್,<br>ನಂ. 22/23, ಟೆಂಪಲ್ ರಸ್ತೆ ಜಯಲಕ್ಷ್ಮೀಪುರಂ, ಮೈಸೂರು–570 002 | ಸದಸ್ಯರು |
| 13 | ಶ್ರೀ ಹೆಚ್.ಡಿ. ನಾಗೇಶ್, ನಗರ ವಿನ್ಯಾಸ ತಜ್ಞರು<br>ನಂ. 596, 1ನೇ ಕ್ರಾಸ್, ವಿಶ್ವಮಾನವ ಜೋಡಿ ರಸ್ತೆ,<br>ಕುವೆಂಪುನಗರ, ಮೈಸೂರು– 570 023 | ಸದಸ್ಯರು |
| 14 | ಡಾ: ಬಿ.ವಿ. ಸುಧಾರಾಣಿ,<br>ಇತಿಹಾಸ ತಜ್ಞರು,<br>ನಂ. 299, 12ನೇ ಕ್ರಾಸ್, ವಿಜಯನಗರ ರೈಲ್ವೆ ಲೇಔಟ್,<br>ಮೈಸೂರು– 570 016 | ಸದಸ್ಯರು |
| 15 | ಉಪ ನಿರ್ದೇಶಕರು,<br>ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪಂರಂಪರೆ ಇಲಾಖೆ,<br>ಅರಮನೆ, ಅವರಣ, ಮೈಸೂರು– 570 001 | ಸದಸ್ಯ ಕಾರ್ಯದರ್ಶಿ |

**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 37

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

**ವಿಷಯ :** ಮೈಸೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ರಚಿಸಲಾದ ತಜ್ಞರ ಸಮಿತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಂಕಇ 39 ಕೆಎಂಯು 2004, ದಿನಾಂಕ: 25–01–2005.
2. ಸರ್ಕಾರದ ಆದೇಶ ಸಂಖ್ಯೆ: ಸಂಕಇ 245 ಕೆಎಂಯು 2005, ದಿನಾಂಕ: 9–1–2006.
3. ಆಯುಕ್ತರು ಪ್ರಾಚ್ಯವಸ್ತು: ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ರವರ ದಿನಾಂಕ 08–12–2010 ರಂದು ಕೊನೆಗೊಂಡ ಪತ್ರ ಸಂ: ಅಪ್ರಾಸಂಪ/ಮೈ– ಶ್ರೀ.ತ.ಸ/2010–11

**ಪ್ರಸ್ತಾವನೆ :**

ಮೈಸೂರು ಮತ್ತು ಶ್ರೀರಂಗಪಟ್ಟಣ ನಗರಗಳಿಗೆ ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆ ಕುರಿತಂತೆ ತಜ್ಞರ ಸಮಿತಿಯನ್ನು ದಿನಾಂಕ: 25–1–2005 ರಿಂದ ಒಂದು ವರ್ಷದ ಅವಧಿಗೆ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಚಿಸಲಾಗಿತ್ತು. ಸದರಿ ಸಮಿತಿಯನ್ನು ದಿನಾಂಕ: 25–1–2006 ರಿಂದ ದಿನಾಂಕ: 25–01–2008 ರವರೆಗೆ ಎರಡು ವರ್ಷಗಳ ಅವಧಿಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಂದುವರಿಸಲಾಗಿತ್ತು.

ಮೈಸೂರು– ಶ್ರೀರಂಗಪಟ್ಟಣ ನಗರಗಳಿಗೆ ಸಂಬಂದಿಸಿದಂತೆ ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಪ್ರತ್ಯೇಕ ತಜ್ಞರ ಸಮಿತಿಯನ್ನು ರಚಿಸುವಂತೆ ಸದಸ್ಯರುಗಳ ಪಟ್ಟಿಯೊಂದಿಗೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತ ಪರಂಪರೆ ಇಲಾಖೆ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 80 ಕೆಎಂಯು 2010 (1), ಬೆಂಗಳೂರು, ದಿನಾಂಕ : 22–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೈಸೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಅನುಬಂಧದಲ್ಲಿ ಕಾಣಿಸುವ ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ಪುನರ್ ರಚಿಸಿ ಸಮಿತಿಯ ಅವಧಿಯನ್ನು ದಿನಾಂಕ 25–01–2008 ರಿಂದ 31–03–2012 ರವರೆಗೆ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ
(ಆಡಳಿತ ಕನ್ನಡ)

**ದಿನಾಂಕ: 22–11–2011ರ ಆದೇಶ ಸಂಖ್ಯೆ: ಕಸಂವಾಪ್ರ 80 ಕೆಎಂಯು 2010 (1)ಕ್ಕೆ**

**ಅನುಬಂಧ**

| ಕ್ರಮ ಸಂಖ್ಯೆ | ಅಧಿಕಾರಿ/ಅಧಿಕಾರೇತರ ಸದಸ್ಯರ ಹೆಸರು | ಹುದ್ದೆ |
|---|---|---|
| 1. | ಜಿಲ್ಲಾಧಿಕಾರಿಗಳು,<br>ಮೈಸೂರು ಜಿಲ್ಲೆ, ಮೈಸೂರು | ಅಧ್ಯಕ್ಷರು |
| 2. | ಆಯುಕ್ತರು,<br>ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ವೆಂಕಟಪ್ಪ ಚಿತ್ರಶಾಲೆ, ಕಸ್ತೂರ್ ಬಾ ರಸ್ತೆ, ಬೆಂಗಳೂರು–560 001 | ಉಪಾಧ್ಯಕ್ಷರು |
| 3. | ಆಯುಕ್ತರು,<br>ಮೈಸೂರು ನಗರ ಪೊಲೀಸ್, ಮೈಸೂರು | ಸದಸ್ಯರು |
| 4 | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು,<br>ಜಿಲ್ಲಾ ಪಂಚಾಯತ್, ಮೈಸೂರು ಜಿಲ್ಲೆ, ಮೈಸೂರು | ಸದಸ್ಯರು |
| 5 | ನಿರ್ದೇಶಕರು,<br>ಪ್ರಾಚ್ಯವಸ್ತು, ಸಂಗ್ರಹಾಲಗಳ ನಿರ್ದೇಶನಾಲಯ, ದಸರಾ ವಸ್ತುಪ್ರದರ್ಶನ ಅವರಣ, ದೊಡ್ಡಕೆರೆ ಮೈದಾನ, ಮೈಸೂರು–570 010 | ಸದಸ್ಯರು |
| 6 | ಡಾ. ಎಂ.ಎಸ್. ನಾಗರಾಜರಾವ್<br>ನಿವೃತ್ತ ಮಹಾನಿರ್ದೇಶಕರು<br>ಭಾರತೀಯ ಪುರಾತತ್ವ ಇಲಾಖೆ,<br>ನಂ. 15, ಗಂಗೋತ್ರಿ ಬಡಾವಣೆ, ಮೈಸೂರು | ಸದಸ್ಯರು |
| 7 | ಮೇಜರ್ ಜನರಲ್ (ನಿವೃತ್ತ) ಡಾ. ಎಸ್.ಜಿ. ಒಂಬತ್ಕೆರೆ,<br>ಪರಿಸರ ತಜ್ಞರು,<br>ನಂ. 475, 7ನೇ ಮುಖ್ಯರಸ್ತೆ, ವಿಜಯನಗರ, 1ನೇ ಹಂತ ಮೈಸೂರು | ಸದಸ್ಯರು |
| 8 | ಶ್ರೀ ಆರ್. ಗುರು<br>ಹಿರಿಯ ನಾಗರೀಕರು,<br>ಅಧ್ಯಕ್ಷರು, ಎನ್.ಆರ್. ಗ್ರೂಪ್ಸ್, ನಂ. 1553,<br>ವಿ.ವಿ. ರೋಡ್, ಮೈಸೂರು– 570 004 | ಸದಸ್ಯರು |

| | | |
|---|---|---|
| 9 | ಡಾ. ಎನ್. ಎಸ್. ರಂಗರಾಜು ಮುಖ್ಯಸ್ಥರು<br>ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ,<br>ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು | ಸದಸ್ಯರು |
| 10 | ಶ್ರೀ ರವೀಂದ್ರ ಗುಂಡೂರಾವ್<br>ವಾಸ್ತುಶಿಲ್ಪ ಸಂರಕ್ಷಕರು<br>ಎ–5, ಹೇಮಾವತಿ ಅಪಾರ್ಟ್‌ಮೆಂಟ್ಸ್,<br>ನಂ. 22/23, ಟೆಂಪಲ್ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು– 570 002 | ಸದಸ್ಯರು |
| 11 | ಶ್ರೀ. ಹೆಚ್.ಡಿ. ನಾಗೇಶ್,<br>ನಗರ ವಿನ್ಯಾಸ ತಜ್ಞರು<br>ನಂ. 596, 1ನೇ ಕ್ರಾಸ್, ವಿಶ್ವಮಾನವ ಜೋಡಿ ರಸ್ತೆ,<br>ಕುವೆಂಪುನಗರ, ಮೈಸೂರು–570 023 | ಸದಸ್ಯರು |
| 12 | ಶ್ರೀ ವಿ.ಎ. ದೇಶಪಾಂಡೆ, ಡೀನ್,<br>ಚಾಮರಾಜೇಂದ್ರ ದೃಶ್ಯ ಕಲಾ ಅಕಾಡೆಮಿ,<br>ಸಯ್ಯಾಜಿ ರಸ್ತೆ, ಮೈಸೂರು– 570 001 | ಸದಸ್ಯರು |
| 13 | ಶ್ರೀ ಎನ್. ಆರ್. ಅಶೋಕ್,<br>ಸ್ಟ್ರಕ್ಚರಲ್ ಇಂಜಿನಿಯರ್, ಪ್ಲಾಟ್ ನಂ: 1,<br>ಸಂಕಲ್ಪ ಗಾರ್ಡನಿಯ ಅಪಾರ್ಟ್‌ಮೆಂಟ್ಸ್, ಗೋಕುಲಂ<br>ಮುಖ್ಯರಸ್ತೆ, ವಿ.ವಿ. ಮೊಹಲ್ಲಾ, ಮೈಸೂರು– 570 002 | ಸದಸ್ಯರು |
| 14 | ಶ್ರೀ ಈಚನೂರು ಕುಮಾರ್<br>ಇತಿಹಾಸ ತಜ್ಞರು,<br>ನಂ. 796, "ಎಂ" ಬ್ಲಾಕ್, ಕುವೆಂಪುನಗರ, ಮೈಸೂರು– 570 023 | ಸದಸ್ಯರು |
| 15 | ಆಯುಕ್ತರು,<br>ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು | ಸದಸ್ಯರು |
| 16 | ಆಯುಕ್ತರು,<br>ಮೈಸೂರು ಮಹಾನಗರ ಪಾಲಿಕೆ, ಮೈಸೂರು | ಸದಸ್ಯರು |
| 17 | ಕಾರ್ಯಪಾಲಕ ಇಂಜಿನಿಯರ್,<br>ಲೋಕೋಪಯೋಗಿ ಇಲಾಖೆ, ಮೈಸೂರು ವಿಭಾಗ, ಮೈಸೂರು | ಸದಸ್ಯರು |
| 18 | ಸಹಾಯಕ ನಿರ್ದೇಶಕರು,<br>ಪ್ರವಾಸೋದ್ಯಮ ಇಲಾಖೆ, ಇರ್ವಿನ್ ರಸ್ತೆ, ಮೈಸೂರು | ಸದಸ್ಯರು |
| 19 | ಉಪ ನಿರ್ದೇಶಕರು,<br>ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ,<br>ಅರಮನೆ ಅವರಣ, ಮೈಸೂರು– 570 001 | ಸದಸ್ಯರು<br>ಕಾರ್ಯದರ್ಶಿ |

**ಎನ್. ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 38

## ವಸತಿ ಸಚಿವಾಲಯ

**ವಿಷಯ :** ಶ್ರೀ ಪಿ. ಗೋಪಾಲಕೃಷ್ಣ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್‌ರವರನ್ನು ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶದ ಸಂಖ್ಯೆ: ಹೆಚ್‌ಯುಡಿ 49 ಎಂಸಿಎಸ್ 95, ದಿನಾಂಕ 1–7–99

2) ಸರ್ಕಾರಿ ಆದೇಶ ಸಂಖ್ಯೆ: ವಇ 3 ಕೊಮಂಸೇ 06, ದಿನಾಂಕ 03–11–2010

3) ಆಯುಕ್ತರು, ಕರ್ನಾಟಕ ಕೊಳಚೆ ಅಭಿವೃದ್ಧಿ ಮಂಡಳಿ ರವರ ಪತ್ರ ಸಂಖ್ಯೆ:ಕಕೊನಿಮ: ಆಡಳಿತ:116:1999–2000/986, ದಿನಾಂಕ 09–03–2011.

4) ಆಯುಕ್ತರು, ಕರ್ನಾಟಕ ಕೊಳಚೆ ಅಭಿವೃದ್ಧಿ ಮಂಡಳಿ ರವರ ಪತ್ರ ಸಂಖ್ಯೆ:ಕಕೊನಿಮ: ಆಡಳಿತ:116:1999–2000/275, ದಿನಾಂಕ 26–07–2011.

5) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಅಭಿಪ್ರಾಯ–3) ಹಿಂಬರಹ ಸಂಖ್ಯೆ: ಲಾ 132/ಅಭಿ/2011, ದಿನಾಂಕ 30–03–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ವೃಂದ ಮತ್ತು ನೇಮಕಾತಿ ಮತ್ತು ಸೇವಾ ನಿಬಂಧನೆ ನಿಯಮಾವಳಿಗಳನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ಮತ್ತು (4)ರ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿರವರ ಪತ್ರಗಳಲ್ಲಿ ಶ್ರೀ ಪಿ. ಗೋಪಾಲಕೃಷ್ಣ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್‌ಗೆ ಕಾರ್ಯಪಾಲಕ ಅಭಿಯಂತರರ ಹುದ್ದೆಗೆ ಮುಂಬಡ್ತಿ ನೀಡುವ ವಿಚಾರವಾಗಿ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಅಭಿಪ್ರಾಯ–3) ಯು ನೀಡಿರುವ ಹಿಂಬರಹದಲ್ಲಿ ಶ್ರೀಯುತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ವಿರುದ್ಧ ಮುಂಬಡ್ತಿ ವಿಚಾರದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ 41267/2004ರ ಪ್ರಕರಣವನ್ನು ಹಿಂತೆಗೆದುಕೊಂಡ ನಂತರ ಶ್ರೀ ಪಿ. ಗೋಪಾಲಕೃಷ್ಣ, ಇವರಿಗೆ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಗೆ ಅವರ ಜೇಷ್ಠತೆ ಮತ್ತು ಅರ್ಹತೆಯ ಆಧಾರದ ಮೇಲೆ ಮುಂಬಡ್ತಿ ನೀಡಲು ಕಾನೂನಿನಲ್ಲಿ ಯಾವುದೇ ಅಡ್ಡಿ ಇರುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಇವರು ಸೇವಾ ಹಿರಿತನವನ್ನು ಹೊಂದಿದ್ದು, ದಿನಾಂಕ 03–11–2010ರ ಸರ್ಕಾರದ ಅಧಿಸೂಚನೆಯಲ್ಲಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿದ್ದು, ಅದರಂತೆ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ವೃಂದದಲ್ಲಿನ ಒಂದು ಹುದ್ದೆಯನ್ನು ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಉನ್ನತೀಕರಿಸಿದಲ್ಲಿ, ಒಟ್ಟಾರೆ ವೃಂದ ಬಲದಲ್ಲಿ ಬದಲಾವಣೆ ಆಗುವುದಿಲ್ಲ ಮತ್ತು ಮಂಡಳಿಗೆ ಹೆಚ್ಚಿನ ಆರ್ಥಿಕ ಹೊಣೆಗಾರಿಕೆ ಬೀಳುವುದಿಲ್ಲವಾದ್ದರಿಂದ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳು 2010ರ ತಿದ್ದುಪಡಿಯನ್ನು ಕಾಯ್ದಿರಿಸಿ, ಮಂಡಳಿಗೆ ಮಂಜೂರಾಗಿರುವ 20 ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗಳಲ್ಲಿ ಶ್ರೀ ಪಿ. ಗೋಪಾಲಕೃಷ್ಣ ರವರ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಯನ್ನು ಸದರಿಯವರು ಸೇವೆಯಲ್ಲಿರುವವರೆಗೆ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಗೆ ವೇತನ ಶ್ರೇಣಿ ರೂ. 18150–26925ರಂತೆ ಮುಂಬಡ್ತಿ ನೀಡುವ ಪ್ರಸ್ತಾವನೆಗೆ ಅನುಮೋದನೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 8 ಕೊಮಂಸೇ 2011, ಬೆಂಗಳೂರು, ದಿನಾಂಕ: 25–11–2011.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳು–2010ರ ತಿದ್ದುಪಡಿಯನ್ನು ಕಾಯ್ದಿರಿಸಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಮಂಜೂರಾಗಿರುವ 20 ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗಳ ಪೈಕಿ 1 ಹುದ್ದೆಯನ್ನು ಕಾರ್ಯಪಾಲಕ ಅಭಿಯಂತರ ಹುದ್ದೆಗೆ ಉನ್ನತೀಕರಿಸಿ ಶ್ರೀ ಪಿ. ಗೋಪಾಲಕೃಷ್ಣ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್‌ರನ್ನು ಕಾರ್ಯನಿರ್ವಾಹಕ ಅಭಿಯಂತರ ಹುದ್ದೆಗೆ ಮುಂಬಡ್ತಿ ನೀಡಿ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 39

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ 42 ಹೆಚ್‌ಎಎಂ 1999 ದಿನಾಂಕ 10–05–2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 73 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2011**

ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಎಂ.ಸಿ. ಸುರೇಶ್ ಕುಮಾರ್ ಬಿನ್ ಚನ್ನಬಸಪ್ಪ,<br>ಸಾಯಿರಾಮ ಬಿಲ್ಡಿಂಗ್, ನಂ. 31, ಸದಾಶಿವನಗರ, ಲಾಯರ್ ಮಂಜಪ್ಪ ಬಿಲ್ಡಿಂಗ್, ನೆಲಮಂಗಲ. | ಸಾಮಾನ್ಯ |
| 2 | ಶ್ರೀಮತಿ ಎಸ್. ಮಾಲತಿ ಕೋಂ ಎಂ.ಸಿ. ಶಿವಲಿಂಗಯ್ಯ,<br>ಸೋಮೋಜಿರಾವ್ ಲೇಔಟ್, ಶಿವಗಣಪತಿ ದೇವಸ್ಥಾನದ ಹಿಂಭಾಗ, ಸುಭಾಶ್‌ನಗರ, ನೆಲಮಂಗಲ ಟೌನ್. | ಎಸ್.ಸಿ.<br>(ಮಹಿಳೆ) |
| 3 | ಶ್ರೀ ಎನ್.ಎಂ. ಚಂದ್ರಶೇಖರ್ ಬಿನ್ ಎನ್.ಹೆಚ್. ಮುರಾರಯ್ಯ,<br>ಸೊಂಡೆಕೊಪ್ಪ ರಸ್ತೆ, ಭೈರವೇಶ್ವರ ನಗರ, ನೆಲಮಂಗಲ ಟೌನ್. | ಬಿ.ಸಿ.ಎಂ. |
| 4 | ಶ್ರೀ ಮಹಮದ್ ಅನ್ಸಾರ್ ಬಿನ್ ಮಹಮದ್ ಯೂಸೂಫ್,<br>ಕೋಟೆ ಬೀದಿ, ಮಾರಮ್ಮನ ದೇವಸ್ಥಾನದ ಹತ್ತಿರ ನೆಲಮಂಗಲ ಟೌನ್. | ಅಲ್ಪಸಂಖ್ಯಾತ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 40

**ಬಿ. ಶಂಕರಪ್ಪ**

ಪೀಠಾಧಿಕಾರಿ–2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ 42 ಹೆಚ್ಎಎಂ 1999 ದಿನಾಂಕ 10-05-2000

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಕೊಪ್ಪಳ ಜಿಲ್ಲೆ ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 76 ಹೆಚ್ಎಎಸ್ 2011, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2011**

ಕೊಪ್ಪಳ ಜಿಲ್ಲೆ ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಶಂಕರ ಭಾವಿಮನಿ | ಎಸ್.ಸಿ. |
| 2 | ಶ್ರೀ ಮರ್ದಾನ್ ಸಾಬ್ ಕಾಸಿಂಸಾಬ್ ಮಲಕಸಮುದ್ರ | ಅಲ್ಪಸಂಖ್ಯಾತ |
| 3 | ಶ್ರೀ ಮೈಲಾರಪ್ಪ ಬಸಪ್ಪ ಅರಕೇರಿ | ಸಾಮಾನ್ಯ |
| 4 | ಶ್ರೀಮತಿ ವಿಜಯಲಕ್ಷ್ಮಿ ಕೃಷ್ಣಮೂರ್ತಿ ಜಾಲಗಾರ್ | ಹಿಂದುಳಿದ ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 41

**ಬಿ. ಶಂಕರಪ್ಪ**

ಪೀಠಾಧಿಕಾರಿ-2, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಪಟ್ಟಣಕ್ಕೆ ಹೊಂದಿಕೊಂಡಂತಿರುವ ಕುಸನೂರು ಗ್ರಾಮದಲ್ಲಿ ಕರ್ನಾಟಕ ಗೃಹ ಮಂಡಳಿಯ 225 ವಸತಿ ಯೋಜನೆಗಾಗಿ ಜಮೀನು ಖರೀದಿಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ವಇ 102 ಕಗೃಮಂ 2010 ದಿನಾಂಕ: 18-05-2010.

2) ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಕಛೇರಿ ಪತ್ರ ಸಂಖ್ಯೆ: ಕಗೃಮಂ/ಭೂಸ್ವಾವಿ/51/2009-10, ದಿನಾಂಕ 07-02-2011, 25-07-2011 ಮತ್ತು 26-09-2011.

**ಪ್ರಸ್ತಾವನೆ :**

ಕರ್ನಾಟಕ ಗೃಹ ಮಂಡಳಿಯು 2010-11ನೇ ಸಾಲಿನಲ್ಲಿ 225 ವಸತಿ ಯೋಜನೆಗಾಗಿ, ಗುಲ್ಬರ್ಗಾ ಪಟ್ಟಣದಲ್ಲಿ 450 ಎಕರೆ ಜಮೀನಿನಲ್ಲಿ ರೂ. 405-00 ಕೋಟಿಗಳ ಅಂದಾಜು ವೆಚ್ಚದಲ್ಲಿ ಸಂಯುಕ್ತ ವಸತಿ ಯೋಜನೆಯನ್ನು ಕೈಗೊಳ್ಳಲು ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರಗಳಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾವನೆ ಸಲ್ಲಿಸುತ್ತಾ, ಕರ್ನಾಟಕ ಗೃಹ ಮಂಡಳಿಯ 225 ವಸತಿ ಯೋಜನೆ ಅಡಿಯಲ್ಲಿ ಗುಲ್ಬರ್ಗಾ ಪಟ್ಟಣಕ್ಕೆ ಹೊಂದಿಕೊಂಡಂತಿರುವ ಕುಸನೂರು ಗ್ರಾಮದ ಸರ್ವೆ ನಂ. 103, 104, ಮತ್ತು ಇತರೆಗಳಲ್ಲಿ 287 ಎಕರೆ ಜಮೀನನ್ನು ಖರೀದಿಸಲು ನಿರ್ಣಯಿಸಿದ್ದು, ಸದರಿ ಜಮೀನಿಗೆ ಬೆಲೆ ನಿಗದಿಪಡಿಸುವ ಸಲುವಾಗಿ ಗುಲ್ಬರ್ಗಾ ಜಿಲ್ಲಾಧಿಕಾರಿಗಳನ್ನು ಕೋರಿದ ಹಿನ್ನೆಲೆಯಲ್ಲಿ, ದಿನಾಂಕ: 10-05-2011ರ ಜಿಲ್ಲಾ ಭೂ-ಖರೀದಿ ಸಮಿತಿ ಸಭೆಯಲ್ಲಿ ಪ್ರತಿ ಎಕರೆ ಜಮೀನನ್ನು ರೂ. 13.00 ರಿಂದ 13.25 ಲಕ್ಷಗಳಂತೆ ಖರೀದಿಸಲು ದರ ನಿಗದಿಪಡಿಸಿದ್ದು, ದಿನಾಂಕ: 18-06-2011ರ ಕರ್ನಾಟಕ ಗೃಹ ಮಂಡಳಿ ಸಭೆಯಲ್ಲಿ ಪ್ರತಿ ಎಕರೆ ಜಮೀನನ್ನು ರೂ. 13-00 ಲಕ್ಷದಂತೆ ಖರೀದಿಸಲು ನಿರ್ಣಯಿಸಿರುತ್ತದೆ. ಸದರಿ ನಿರ್ಣಯದನ್ವಯ, ಗುಲ್ಬರ್ಗಾ ಪಟ್ಟಣಕ್ಕೆ ಹೊಂದಿಕೊಂಡಂತಿರುವ ಕುಸನೂರು ಗ್ರಾಮದ ಸರ್ವೆ ನಂ. 103, 104 ಮತ್ತು ಇತರೆಗಳಲ್ಲಿ ಒಟ್ಟು 287 ಎಕರೆ ಜಮೀನನ್ನು ಕರ್ನಾಟಕ ಗೃಹ ಮಂಡಳಿಯ 225 ವಸತಿ ಯೋಜನೆಗಾಗಿ ಪ್ರತಿ ಎಕರೆ ಜಮೀನನ್ನು ರೂ. 13-00 ಲಕ್ಷದಂತೆ ಖರೀದಿಸಲು, ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962 ಸೆಕ್ಷನ್ 33 (1) ರನ್ವಯ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಕರ್ನಾಟಕ ಗೃಹ ಮಂಡಳಿಯ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 101 ಕಗೃಮಂ 2011, ಬೆಂಗಳೂರು, ದಿನಾಂಕ: 15-11-2011.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಪಟ್ಟಣಕ್ಕೆ ಹೊಂದಿಕೊಂಡಂತಿರುವ ಕುಸನೂರು ಗ್ರಾಮದ ಸರ್ವೆ ನಂ. 103, 104 ಮತ್ತು ಇತರೆಗಳಲ್ಲಿ ಒಟ್ಟು 287 ಎಕರೆ ಜಮೀನನ್ನು ಕರ್ನಾಟಕ ಗೃಹ ಮಂಡಳಿಯ 225, ವಸತಿ ಯೋಜನೆಯಡಿಯ ವಸತಿ ಯೋಜನೆಗಾಗಿ ಪ್ರತಿ ಎಕರೆ ಜಮೀನನ್ನು ರೂ. 13-00 ಲಕ್ಷ ದರದಂತೆ (ರೂ. ಹದಿಮೂರು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಖರೀದಿಸಲು ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962 ಸೆಕ್ಷನ್ 33 (1) ರನ್ವಯ ಸರ್ಕಾರದ ಅನುಮೋದನೆ ನೀಡಿದೆ.

1) ಖರೀದಿಗೆ ಸಂಬಂಧಿಸಿದ ಇತರೆ ವೆಚ್ಚಗಳನ್ನು ನಿಯಮಾನುಸಾರ ಭರಿಸಲು.
2) ಸರ್ಕಾರದ ಆರ್ಥಿಕ ನೆರವನ್ನು ಅಪೇಕ್ಷಿಸದೆ ಹಾಗೂ ಸದರಿ ಜಮೀನಿನ ಮೇಲೆ ಯಾವುದೇ ಋಣಭಾರವಿಲ್ಲವೆಂದು ಖಚಿತಪಡಿಸಿಕೊಳ್ಳತಕ್ಕದ್ದು.
3) ಜಮೀನುಗಳು ಜನವಸತಿಗೆ ಮತ್ತು ಮುಖ್ಯ ರಸ್ತೆಗಳಿಗೆ ಹೊಂದಿಕೊಂಡಂತಿರಬೇಕು.
4) ವಸ್ತುನಿಷ್ಠವಾದ ಬೇಡಿಕೆ ಸಮೀಕ್ಷೆ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 42

**ಎನ್. ಪಾರ್ವತಿ**

ಪೀಠಾಧಿಕಾರಿ-3, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕು, ಕೆ.ಕೆ. ಕೊಪ್ಪ, ಖಮಕಾರಟ್ಟಿ ಮತ್ತು ಕೊಂಡಸಕೊಪ್ಪ ಗ್ರಾಮಗಳಲ್ಲಿ ಕರ್ನಾಟಕ ಗೃಹ ಮಂಡಳಿಯ 225 ವಸತಿ ಯೋಜನೆಗಾಗಿ ಜಮೀನು ಖರೀದಿಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಆಯುಕ್ತರು, ಕರ್ನಾಟಕ ಗೃಹ ಮಂಡಳಿ ರವರ ಕಛೇರಿ ಪತ್ರ ಸಂಖ್ಯೆ: ಕಗೃಮಂ/ಭೂಸ್ವಾವಿ/51/2009-10, ದಿನಾಂಕ 07-02-2011, 25-07-2011 ಮತ್ತು 26-09-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾವನೆ ಸಲ್ಲಿಸುತ್ತಾ, ಕರ್ನಾಟಕ ಗೃಹ ಮಂಡಳಿಯ 225 ವಸತಿ ಯೋಜನೆಗಾಗಿ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕು, ಕೆ.ಕೆ. ಕೊಪ್ಪ ಗ್ರಾಮದ ಸರ್ವೆ ನಂ. 122, 123 ಮತ್ತು ಇತರೆಗಳಲ್ಲಿ, ಖಮಕಾರಟ್ಟಿ ಗ್ರಾಮದ ಸರ್ವೆ ನಂ. 34, 35, 36 ಮತ್ತು ಇತರೆಗಳಲ್ಲಿ ಹಾಗೂ ಕೊಂಡಸಕೊಪ್ಪ ಗ್ರಾಮದ ಸರ್ವೆ ನಂ. 17, 18, 29, 33, 34 ಮತ್ತು ಇತರೆಗಳಲ್ಲಿ ಸುಮಾರು 750 ಎಕರೆ ಜಮೀನನ್ನು ಖರೀದಿಸಲು ನಿರ್ಣಯಿಸಿದ್ದು, ಸದರಿ ಜಮೀನಿಗೆ ಬೆಲೆ ನಿಗದಿಪಡಿಸುವ ಸಲುವಾಗಿ ಬೆಳಗಾವಿ ಜಿಲ್ಲಾಧಿಕಾರಿಗಳನ್ನು ಕೋರಿದ್ದ ಹಿನ್ನೆಲೆಯಲ್ಲಿ, ದಿನಾಂಕ: 27-04-2011 ರಂದು ನಡೆದ ಜಿಲ್ಲಾ ಭೂ-ಖರೀದಿ ಸಮಿತಿ ಸಭೆಯಲ್ಲಿ ಪ್ರತಿ ಎಕರೆ ಜಮೀನನ್ನು ರೂ. 10.80 ಲಕ್ಷಗಳಂತೆ ಖರೀದಿಸಲು ದರ ನಿಗದಿಪಡಿಸಿದ್ದು, ದಿನಾಂಕ: 18-06-2011ರ ಕರ್ನಾಟಕ ಗೃಹ ಮಂಡಳಿ ಸಭೆಯಲ್ಲಿ ಪ್ರತಿ ಎಕರೆ ಜಮೀನನ್ನು ರೂ. 10.80 ಲಕ್ಷದಂತೆ ಖರೀದಿಸಲು ನಿರ್ಣಯಿಸಿರುತ್ತದೆ. ಸದರಿ ನಿರ್ಣಯದನ್ವಯ, ಬೆಳಗಾವಿ ತಾಲ್ಲೂಕು, ಕೆ.ಕೆ.ಕೊಪ್ಪ ಗ್ರಾಮದ ಸರ್ವೆ ನಂ. 122, 123 ಮತ್ತು ಇತರೆಗಳಲ್ಲಿ, ಖಮಕಾರಟ್ಟಿ ಗ್ರಾಮದ ಸರ್ವೆ ನಂ. 34, 35, 36, ಮತ್ತು ಇತರೆಗಳಲ್ಲಿ ಹಾಗೂ ಕೊಂಡಸಕೊಪ್ಪ ಗ್ರಾಮದ ಸರ್ವೆ ನಂ. 17, 18, 29, 33, 34 ಮತ್ತು ಇತರೆಗಳಲ್ಲಿ ಒಟ್ಟು 750 ಎಕರೆ ಜಮೀನನ್ನು ಪ್ರತಿ ಎಕರೆಗೆ ರೂ. 10.80 ಲಕ್ಷಗಳಂತೆ ಖರೀದಿಸಲು, ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962 ಸೆಕ್ಷನ್ 33 (1) ರನ್ವಯ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಕರ್ನಾಟಕ ಗೃಹ ಮಂಡಳಿಯ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 317 ಕಗೃಮಂ 2011, ಬೆಂಗಳೂರು, ದಿನಾಂಕ: 15ನೇ ನವೆಂಬರ್ 2011.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕು, ಕೆ.ಕೆ.ಕೊಪ್ಪ ಗ್ರಾಮದ ಸರ್ವೆ ನಂ. 122, 123 ಮತ್ತು ಇತರೆಗಳಲ್ಲಿ, ಖಮಕಾರಟ್ಟಿ ಗ್ರಾಮದ ಸರ್ವೆ ನಂ. 34, 35, 36 ಮತ್ತು ಇತರೆಗಳಲ್ಲಿ ಹಾಗೂ ಕೊಂಡಸಕೊಪ್ಪ ಗ್ರಾಮದ ಸರ್ವೆ ನಂ. 17, 18, 29, 33, 34 ಮತ್ತು ಇತರೆಗಳಲ್ಲಿ ಒಟ್ಟು 750 ಎಕರೆ ಜಮೀನನ್ನು ಪ್ರತಿ ಎಕರೆಗೆ ರೂ. 10.80 ಲಕ್ಷ (ರೂ. ಹತ್ತು ಲಕ್ಷದ ಎಂಭತ್ತು ಸಾವಿರ ರೂ.ಗಳು ಮಾತ್ರ) ದಂತೆ, ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಖರೀದಿಸಲು ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962 ಸೆಕ್ಷನ್ 33 (1) ರನ್ವಯ ಸರ್ಕಾರದ ಅನುಮೋದನೆ ನೀಡಿದೆ.

1) ಖರೀದಿಗೆ ಸಂಬಂಧಿಸಿದ ಇತರೆ ವೆಚ್ಚಗಳನ್ನು ನಿಯಮಾನುಸಾರ ಭರಿಸಲು.
2) ಸರ್ಕಾರದ ಆರ್ಥಿಕ ನೆರವನ್ನು ಅಪೇಕ್ಷಿಸದೆ ಹಾಗೂ ಸದರಿ ಜಮೀನಿನ ಮೇಲೆ ಯಾವುದೇ ಋಣಭಾರವಿಲ್ಲವೆಂದು ಖಚಿತಪಡಿಸಿಕೊಳ್ಳತಕ್ಕದ್ದು.
3) ಜಮೀನುಗಳು ಜನವಸತಿಗೆ ಮತ್ತು ಮುಖ್ಯ ರಸ್ತೆಗಳಿಗೆ ಹೊಂದಿಕೊಂಡಂತಿರಬೇಕು.
4) ವಸ್ತುನಿಷ್ಠವಾದ ಬೇಡಿಕೆ ಸಮೀಕ್ಷೆ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 43

**ಎನ್. ಪಾರ್ವತಿ**

ಪೀಠಾಧಿಕಾರಿ-3, ವಸತಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ, ಚಿತ್ತಾಪೂರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ 42 ಹೆಚ್‌ಎಎಂ 1999 ದಿನಾಂಕ 10-05-2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ಗುಲ್ಬರ್ಗಾ ಜಿಲ್ಲೆ, ಚಿತ್ತಾಪೂರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 65 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2011**

ಗುಲ್ಬರ್ಗಾ ಜಿಲ್ಲೆ ಚಿತ್ತಾಪೂರ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಬಸವರಾಜ ಎಂ. ಚಿನ್ಮಳ್ಳಿ,<br>ರಿಂಗ್ ರೋಡ್, ಚಿತ್ತಾಪೂರ. | ಹಿಂದುಳಿದ ವರ್ಗ |
| 2 | ಶ್ರೀ ರಾಮದಾಸ ಬಿನ್ ಕೀಶನ ಚವ್ಹಾಣ,<br>ಸ್ಟೇಶನ ತಾಂಡಾ, ಚಿತ್ತಾಪೂರ. | ಎಸ್.ಸಿ. |
| 3 | ಶ್ರೀಮತಿ ಸುಮಿತ್ರಾ ಉದಯ ಸಿಂಪಿ,<br>ಮಠಪತಿ ಗಲ್ಲಿ, ಚಿತ್ತಾಪೂರ. | ಮಹಿಳೆ |
| 4 | ಶಿ ಬಾಬುಮಿಯ್ಯಾ ಬಿನ್ ಗೌಸಸಾಬ, ಕಲಗುರ್ತಿ. | ಅ.ಸಂ. |

ಪಿ.ಆರ್. 44

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಶಂಕರಪ್ಪ**
ಪೀಠಾಧಿಕಾರಿ–2, ವಸತಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಗುಲ್ಬರ್ಗಾ ಮಹಾನಗರಪಾಲಿಕೆಯ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ:**
1) ಆಯುಕ್ತರು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾರವರ ಪತ್ರ ಸಂಖ್ಯೆ:ಕಂ.ಪ್ರಾಆಗು:ಪುರಸಭೆ:ಸಿಆರ್:76–08–09, ದಿ: 8–12–2008.
2) ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆರವರ ಅ.ಸ.ಪತ್ರ ಸಂಖ್ಯೆ:ಜಿನಕೋ:ಯೋಜನೆ:58:2010–11:11 ದಿ: 20–11–2010 ಮತ್ತು ಸಂಖ್ಯೆ: ಡಿಯುಡಿಸಿ: ಸಾಮಾನ್ಯ: 2011–12:8672 ದಿನಾಂಕ: 13–9–2011.
3) ವ್ಯ.ನಿ., ಕನನೀಸ ಒಚಮಂ ರವರ ಪತ್ರ ಸಂಖ್ಯೆ:ಕಜಮ/ಹೆಚಾರ್ ಡಿ–2/ಗುನಿದು–13/2010–11/2202, ದಿನಾಂಕ 04–01–2011.
4) ಸರ್ಕಾರದ ಕಾರ್ಯದರ್ಶಿಗಳು ನಗರಾಭಿವೃದ್ಧಿ ಇಲಾಖೆರವರ ಅಧ್ಯಕ್ಷತೆಯಲ್ಲಿ ದಿನಾಂಕ: 04.02.2011 ಮತ್ತು 16.05.2011 ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಆಯುಕ್ತರು ಹಾಗೂ ವಿಭಾಗಾಧಿಕಾರಿಗಳು ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ರವರು ಗುಲ್ಬರ್ಗಾ ನಗರದ ಕುಡಿಯುವ ನೀರು ಸರಬರಾಜು ಹಾಗೂ ಒಳಚರಂಡಿ ವ್ಯವಸ್ಥೆಯ ನಿರ್ವಹಣೆ ಮತ್ತು ದುರಸ್ತಿಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಗುಲ್ಬರ್ಗಾ ವಿಭಾಗ ಇವರಿಗೆ ಹಸ್ತಾಂತರಿಸಲು ಕೋರಿರುತ್ತಾರೆ. ಇದಲ್ಲದೆ, ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ರವರು ಮೇಲೆ ಓದಲಾದ ಕ್ರಮಾಂಕ (2)ರ ಪತ್ರಗಳಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯನ್ನು ಜಲಮಂಡಳಿಗೆ ಹಸ್ತಾಂತರಿಸಲು ಅಗತ್ಯ ಮಾಹಿತಿಯನ್ನು ಮತ್ತು ಒಪ್ಪಂದ ಪತ್ರಗಳನ್ನು ಸರ್ಕಾರದ ಅವಗಾಹನೆಗೆ ಮತ್ತು ಅನುಮೋದನೆಗೆ ಸಲ್ಲಿಸಿರುತ್ತಾರೆ. ಈ ಕುರಿತು ಮೇಲೆ ಓದಲಾದ ಕ್ರಮಾಂಕ (3)ರ ಪತ್ರದಲ್ಲಿ ಜಲಮಂಡಳಿಯು ಗುಲ್ಬರ್ಗಾ ಮಹಾನಗರಪಾಲಿಕೆ ನೀರು ಸರಬರಾಜು ವ್ಯವಸ್ಥೆಯನ್ನು ಕೆಲವು ಷರತ್ತುಗಳೊಂದಿಗೆ ವಹಿಸಿಕೊಳ್ಳಲು ಒಪ್ಪಿದ್ದು, ಮೇಲೆ ಓದಲಾದ ಕ್ರಮಾಂಕ (4) ರ ಸಭೆಗಳಲ್ಲಿ ನಿರ್ಣಯಿಸಿದಂತೆ ಸರ್ಕಾರದ ಹಂತದಲ್ಲಿ ನಡೆದ ಸಭೆಗಳಲ್ಲಿ ಕೂಲಂಕಷವಾಗಿ ಚರ್ಚಿಸಿ, ಹಲವಾರು ಸಲಹೆಗಳನ್ನು ಗುಲ್ಬರ್ಗಾ ಮಹಾನಗರಪಾಲಿಕೆ ಮತ್ತು ಜಲಮಂಡಳಿ ಸಂಸ್ಥೆಗಳಿಗೆ ನೀಡಿ ಪ್ರಸ್ತಾವನೆಯನ್ನು ಮರು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದರಂತೆ ಜಿಲ್ಲಾಧಿಕಾರಿಗಳು, ಸದರಿ ಪ್ರಸ್ತಾವನೆಯನ್ನು ಪುನಃ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಿರುತ್ತಾರೆ.

ಎರಡನೆಯದಾಗಿ, ಗುಲ್ಬರ್ಗಾ ಮಹಾನಗರಪಾಲಿಕೆಯ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸುಧಾರಿಸುವ ದೃಷ್ಟಿಯಿಂದ ಅಗತ್ಯ ಕ್ರಮಗಳನ್ನು ಕೈಗೊಳ್ಳುವ ಹಿನ್ನೆಲೆಯಲ್ಲಿ ಮಾನ್ಯ ಜಲಸಂಪನ್ಮೂಲ ಇಲಾಖೆ ಸಚಿವರೊಂದಿಗೆ ಚರ್ಚಿಸಿದಂತೆ ಮತ್ತು ಗುಲ್ಬರ್ಗಾ ಮಹಾನಗರಪಾಲಿಕೆಯ ಹಾಗೂ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅಧಿಕಾರಿಗಳೊಂದಿಗೆ ಚರ್ಚಿಸಿ ಈ ಕುರಿತು ಸರ್ಕಾರದ ಹಂತದಲ್ಲಿ ಹಲವಾರು ಸಭೆಗಳನ್ನು ನಡೆಸಿ ಎರಡೂ ಸಂಸ್ಥೆಗಳು ನೀರು ಸರಬರಾಜು ನಿರ್ವಹಣೆಯನ್ನು ಹಸ್ತಾಂತರಿಸಲು ಮತ್ತು ನಿರ್ವಹಿಸಲು ಪರಸ್ಪರ ಒಪ್ಪಂದವನ್ನು ದಿನಾಂಕ: 1–4–2011 ರಂದು ಕೆಲವು ಷರತ್ತು ಮತ್ತು ನಿಬಂಧನೆಗಳನ್ವಯ ಒಡಂಬಡಿಕೆ ಮಾಡಿಕೊಂಡಿದ್ದು, ಸದರಿ ನೀರು ಸರಬರಾಜು ನಿರ್ವಹಣೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸಲು ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಮುಂದುವರೆದು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ. ಇದಲ್ಲದೆ, ಮಾನ್ಯ ಮುಖ್ಯ ಮಂತ್ರಿಯವರು ದಿನಾಂಕ: 20–9–2011ರ ಟಿಪ್ಪಣಿಯಲ್ಲಿ ತಾವು ದಿನಾಂಕ: 17–9–2011ರಂದು ಗುಲ್ಬರ್ಗಾ ನಗರದ ಪ್ರವಾಸದ ಸಮಯದಲ್ಲಿ ಸಾರ್ವಜನಿಕರ ಕುಂದು ಕೊರತೆಗಳನ್ನು ಆಲಿಸಿ ಕುಡಿಯುವ ನೀರು ಸರಬರಾಜಿನಲ್ಲಿ

ಸಾರ್ವಜನಿಕರು ಎದುರಿಸುತ್ತಿರುವ ತೊಂದರೆ ಕುರಿತು ಶೀಘ್ರವಾಗಿ ಅಗತ್ಯ ಕ್ರಮ ಕೈಗೊಂಡು ಕುಡಿಯುವ ನೀರಿನ ಸಮಸ್ಯೆಯನ್ನು ಪರಿಹರಿಸಲು ಸೂಚಿಸಿರುತ್ತಾರೆ.

ಹಾಲಿ ಗುಲ್ಬರ್ಗಾ ಮಹಾನಗರಪಾಲಿಕೆಯಲ್ಲಿ ನೀರು ಸರಬರಾಜು ವ್ಯವಸ್ಥೆಗೆ ತಾಂತ್ರಿಕ ಸಿಬ್ಬಂದಿಗಳ ಕೊರತೆ, ನೀರಿನ ಶುಲ್ಕದ ಅಸಮರ್ಪಕ ವಸೂಲಾತಿ, ನೀರು ಸೋರುವಿಕೆ, ನೀರಿನ ಪೋಲಾಗುವಿಕೆ, ಸೂಕ್ತ ಮೇಲ್ವಿಚಾರಣಾ ಕೊರತೆ ಇತ್ಯಾದಿ ಕಾರಣಗಳಿಂದ ಮಹಾನಗರಪಾಲಿಕೆಯು ನೀರು ಸರಬರಾಜು ನಿರ್ವಹಣೆ ವ್ಯವಸ್ಥೆಯನ್ನು ಸಮರ್ಪಕವಾಗಿ ನಿರ್ವಹಿಸಲು ಸಂಪೂರ್ಣವಾಗಿ ವಿಫಲವಾಗಿರುವುದರಿಂದ ಸದರಿ ವ್ಯವಸ್ಥೆಯನ್ನು ಮಹಾನಗರಪಾಲಿಕೆಯಿಂದ ಸುಧಾರಣಾ ಕ್ರಮ ಜರುಗಿಸುವುದು ಕಷ್ಟ ಸಾಧ್ಯವಾಗಿರುವುದೆಂದು ಗುಲ್ಬರ್ಗಾ ಮಹಾನಗರಪಾಲಿಕೆಯ ನೀರು ಸರಬರಾಜು ವ್ಯವಸ್ಥೆಯನ್ನು (ನೀರು ಶುಲ್ಕ ವಸೂಲಾತಿ) ಮತ್ತು ಒಳಚರಂಡಿ ವ್ಯವಸ್ಥೆ ನಿರ್ವಹಣೆಯನ್ನು ಸಿಬ್ಬಂದಿ ಸಮೇತವಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಹಸ್ತಾಂತರಿಸುವಂತೆ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 04 ಯುಡಬ್ಲ್ಯೂಎಸ್ 2010, ಬೆಂಗಳೂರು, ದಿನಾಂಕ: 11–11–2011.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಮಹಾನಗರಪಾಲಿಕೆಯ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ನಿರ್ವಹಣೆಯನ್ನು (ನೀರಿನ ಕರ ವಸೂಲಾತಿ ಸೇರಿದಂತೆ ಸಿಬ್ಬಂದಿ ಸಮೇತವಾಗಿ) ಗುಲ್ಬರ್ಗಾ ಮಹಾನಗರ ಪಾಲಿಕೆಯಿಂದ ದಿನಾಂಕ 1–12–2011 ರಿಂದ ಜಾರಿಗೆ ಬರುವಂತೆ ಸಂಪೂರ್ಣವಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವಿಭಾಗ, ಗುಲ್ಬರ್ಗಾರವರಿಗೆ ವಹಿಸಿಕೊಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ಕೂಡಲೇ ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ತತ್ಸಂಬಂಧವಾಗಿ ಈಗಾಗಲೇ ಉಬಯ ಸಂಸ್ಥೆಗಳು ಮಾಡಿಕೊಂಡ ಒಪ್ಪಂದದಂತೆ ಹಾಗೂ ಈ ಆದೇಶದೊಂದಿಗೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ತಕ್ಷಣವೆ ಮುಂದಿನ ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಅನುಬಂಧ

**ಗುಲ್ಬರ್ಗಾ ನಗರದ ಕುಡಿಯುವ ನೀರು ಸರಬರಾಜು ಮತ್ತು ಒಳಚರಂಡಿ ನಿರ್ವಹಣೆ ಹಾಗೂ ದುರಸ್ಥಿಯನ್ನು ಕ.ನ.ನೀ.ಸ. ಮತ್ತು ಒ.ಚ.ಮಂಡಳಿಗೆ ಹಸ್ತಾಂತರಿಸಲು ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ:ನಅಇ 04 ಯುಡಬ್ಲ್ಯೂಎಸ್ 2010, ದಿನಾಂಕ: 11.11.2011 ಕ್ಕೆ ಷರತ್ತು ಮತ್ತು ನಿಬಂಧನೆಗಳು:**

1) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ದಿನಾಂಕ: 01.12.2011 ರಿಂದ ಅನ್ವಯಿಸುವಂತೆ ಗುಲ್ಬರ್ಗಾ ನಗರದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯನ್ನು ನಿರ್ವಹಿಸತಕ್ಕದ್ದು. ಗುಲ್ಬರ್ಗಾ ಮಹಾ ನಗರಪಾಲಿಕೆಯು ತನ್ನ ಅಧೀನದಲ್ಲಿರುವ ನೀರು ಸರಬರಾಜು ಯೋಜನೆಯ ಛರ ಮತ್ತು ಸ್ಥಿರ ಆಸ್ತಿ, ರಿಪೇರಿ, ನಿರ್ವಹಣೆ, ನೀರಿನ ಕರ ವಸೂಲಾತಿ, ಗುತ್ತಿಗೆದಾರರಿಗೆ ಪಾವತಿ ಮಾಡಿದ ಮತ್ತು ಬಾಕಿ ಪಾವತಿ ಮಾಡಬೇಕಾಗಿರುವ ವಿವರಗಳು, ರೇಖಾ ಚಿತ್ರಗಳು (ಡ್ರಾಯಿಂಗ್ಸ್), ನೀರು ವಿತರಣಾ ಜಾಲದ ನಕ್ಷೆಗಳು, ದಾಖಲೆಗಳ ಕಡತಗಳು ಮತ್ತು ಸ್ಟಾಕ್ ಪುಸ್ತಕಗಳು, ಮತ್ತು ನಗರಸಭೆಯಲ್ಲಿ ಬಾಕಿ ಉಳಿದಿರುವ ಇತರೆ ಸಂಬಂಧಪಟ್ಟ ಸಾಮಗ್ರಿಗಳನ್ನು ಕ.ನ.ನೀ.ಸ.ಒ.ಚ. ಮಂಡಳಿಗೆ ಹಸ್ತಾಂತರಿಸತಕ್ಕದ್ದು.

2) ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಸರ್ಕಾರವು ಕಾಲದಿಂದ ಕಾಲಕ್ಕೆ ನಿಗದಿಪಡಿಸುವ ಕನಿಷ್ಠ ದರಗಳಿಗೆ ಮೇಲ್ಪಟ್ಟು ದುರಸ್ಥಿ ಮತ್ತು ನಿರ್ವಹಣಾ ವೆಚ್ಚ ಹಾಗೂ ಇತ್ಯಾದಿ ವೆಚ್ಚಗಳನ್ನೊಳಗೊಂಡಂತೆ ಗುಲ್ಬರ್ಗಾ ಮಹಾನಗರ ಪಾಲಿಕೆಯೊಂದಿಗೆ ಚರ್ಚಿಸಿ, ಒಪ್ಪಂದಕ್ಕೆ ಬಂದು ನೀರಿನ ಕರವನ್ನು/ಕಂದಾಯ, ವಿಧಿಸುವುದು ಮತ್ತು ಬಾಡಿಗೆ, ಶುಲ್ಕ, ಠೇವಣಿ ಇತ್ಯಾದಿಯನ್ನು ಬಳಕೆದಾರರಿಂದ ಮಹಾ ನಗರ ಪಾಲಿಕೆಯ ಪರವಾಗಿ ವಸೂಲು ಮಾಡಿ ಸಂಗ್ರಹಿಸುವುದು, ಮಂಡಳಿಯು ಅನಧಿಕೃತ ನೀರು ಸಂಪರ್ಕಗಳನ್ನು ಸಕ್ರಮಗೊಳಿಸುವುದು/ನೀರಿನ ಸಂಪರ್ಕ ತೆಗೆದುಹಾಕುವುದು ಮತ್ತು ನೀರಿನ ಸರಬರಾಜು ವ್ಯವಸ್ಥೆಯನ್ನು ಸುಧಾರಿಸಲು ಅಗತ್ಯ ಕ್ರಮ ಜರುಗಿಸಬಹುದಾಗಿರುತ್ತದೆ. ಸಾರ್ವಜನಿಕರಿಗೆ ನ್ಯಾಯಯುತವಾಗಿ ನೀರು ಸರಬರಾಜು ಮಾಡುವ ಉದ್ದೇಶದಿಂದ ಮುಖ್ಯ ಕೊಳವೆ ಮಾರ್ಗಗಳಿಂದ ಪಡೆದಿರುವ ಎಲ್ಲಾ ಸಂಪರ್ಕಗಳನ್ನು ಕಡೆದು ವಿತರಣಾ ಕೊಳವೆ ಮಾರ್ಗದಿಂದ ಮಾತ್ರ ಪ್ರತಿಯೊಂದು ಸಂಪರ್ಕಕ್ಕೂ ನೀರು ಒದಗಿಸತಕ್ಕದ್ದು.

3) ನೀರಿನ ಕಂದಾಯ ವಸೂಲಿ ಹಾಗೂ ವೆಚ್ಚಗಳ ಲೆಕ್ಕಪತ್ರಗಳನ್ನು ಪ್ರತಿ ತಿಂಗಳು ಆಡಿಟ್ ಮಾಡಿ ಸದರಿ ಪ್ರತಿಯನ್ನು ಮಹಾನಗರ ಪಾಲಿಕೆಗೆ ಕಳುಹಿಸುವುದು. ಕ.ನ.ನೀ.ಸ.ಒ.ಚ. ಮಂಡಳಿ ನೀರು ನಿರ್ವಹಣೆಗೆ ಅಗತ್ಯವಿರುವ ತುರ್ತು ಕೆಲಸಗಳ ನಿಮಿತ್ತ ಸಿವಿಲ್ ಕಾಮಗಾರಿಗಳಿಗೆ ರೂ. 10.00 ಲಕ್ಷದವರೆವಿಗೂ ಹಾಗೂ ಎಲೆಕ್ಟ್ರೋ ಮೆಕ್ಯಾನಿಕಲ್ ಕಾಮಗಾರಿಗಳಿಗೆ ರೂ. 10.00 ಲಕ್ಷಗಳವರೆವಿಗೂ ಭರಿಸಿ ನಂತರ ಮಾಸಿಕ ಬಿಲ್‌ನಲ್ಲಿ ಮಹಾನಗರಪಾಲಿಕೆಗೆ ಸಲ್ಲಿಸಬಹುದಾಗಿರುತ್ತದೆ. ಸದರಿ ಮೊತ್ತಕ್ಕಿಂತ ಮೇಲ್ಪಟ್ಟ ನಿರ್ವಹಣಾ ವೆಚ್ಚಗಳನ್ನು ಮಹಾನಗರ ಪಾಲಿಕೆಯ ಅನುಮೋದನೆ ಪಡೆದು ನಂತರ ಭರಿಸುವುದು.

4) ನಿಗದಿತ ಅಥವಾ ನಿಗದಿತವಲ್ಲದ ನಿರ್ವಹಣೆ ವೆಚ್ಚವನ್ನು ಭರಿಸಲು ಮಹಾನಗರ ಪಾಲಿಕೆಯು 3 ತಿಂಗಳ ನೀರು ನಿರ್ವಹಣೆ ವೆಚ್ಚದ ಮೊತ್ತವನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಠೇವಣಿ ರೂಪದಲ್ಲಿ ನೀಡುವುದು. ಈ ಕುರಿತು ಅಗತ್ಯಬಿದ್ದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ, ಜಲಮಂಡಳಿ ಹಾಗೂ ಮಹಾನಗರಪಾಲಿಕೆಯ ಕಾರ್ಯಪಾಲಕ ಅಭಿಯಂತರರುಗಳು ಮತ್ತು ಸಹಾಯಕ ಕಾರ್ಯಪಾಲಕ ಅಭಿಯಂತರರುಗಳನ್ನೊಳಗೊಂಡ ಸಮಿತಿಯನ್ನು ರಚಿಸಿ, ಸದರಿ ಮೊತ್ತವನ್ನು ಮಹಾನಗರಪಾಲಿಕೆಯು ಜಲಮಂಡಳಿಗೆ ಠೇವಣಿ ರೂಪದಲ್ಲಿ ನೀಡುವುದು. ನೀರು ಸರಬರಾಜು ನಿರ್ವಹಣೆಗೆ ಅಗತ್ಯವಿರುವ ತುರ್ತು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ರೂ. 2.00 ಕೋಟಿ ಹಣವನ್ನು ಮಹಾನಗರಪಾಲಿಕೆಯು ತಕ್ಷಣವೇ ಕ.ನ.ನೀ.ಸ. ಮತ್ತು ಒ.ಚ.ಮಂ.ಗೆ ತನ್ನ ಸಂಪನ್ಮೂಲದಿಂದ ಒಂದೇ ಕಂತಿನಲ್ಲಿ ಪಾವತಿಸುವುದು, ಮತ್ತು ಬಾಕಿ ಉಳಿದ ರೂ. 2.00 ಕೋಟಿಗಳ ಮೊತ್ತವನ್ನು ಹಂತ ಹಂತವಾಗಿ ಮಂಡಳಿಗೆ ಜಮಾ ಮಾಡುವುದು. ಒಂದು ವೇಳೆ ಸದರಿ ಮೊತ್ತವು ತಕ್ಷಣದ ದುರಸ್ಥಿ ಕಾಮಗಾರಿಗಳಿಗೆ ಕಡಿಮೆ ಎಂದು ಕಂಡುಬಂದಲ್ಲಿ ಮೇಲಿನ ಸಮಿತಿಯು ತೀರ್ಮಾನಿಸಿದ ಮೊತ್ತವನ್ನು ಮಹಾನಗರಪಾಲಿಕೆಯು ತನ್ನ ಸ್ವಂತ ಸಂಪನ್ಮೂಲಗಳಿಂದ ಅಥವಾ ಎಸ್.ಎಫ್.ಸಿ. ಅನುದಾನದಿಂದ ಬಿಡುಗಡೆ ಮಾಡಲು ಸೂಕ್ತ ಕ್ರಮವಹಿಸುವುದು.

5) ಕ.ನ.ನೀ.ಸ ಮತ್ತು ಒ.ಚ ಮಂಡಳಿಯು ನೀರು ಸರಬರಾಜು ನಿರ್ವಹಣೆಗೆ ಅಗತ್ಯವಿರುವ ವೆಚ್ಚವನ್ನು ಭರಿಸುವುದು ಮತ್ತು ಸದರಿ ಮೊತ್ತವನ್ನು ಮಹಾನಗರಪಾಲಿಕೆಯಿಂದ ಮರುಪಾವತಿ ಪಡೆಯುವುದು. ನೀರಿನ ಕಂದಾಯ ವಸೂಲಾತಿಯ ವ್ಯತ್ಯಾಸದ ಮೊತ್ತವನ್ನು ಮಹಾನಗರ ಪಾಲಿಕೆಯು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ನೀಡಲು ಒಪ್ಪದಿದ್ದಲ್ಲಿ ಸದರಿ ಬಾಕಿಯನ್ನು ನೀರಿನ ಕರದ ಮೂಲಕ ಮಂಡಳಿಯೇ ನೇರವಾಗಿ ವಸೂಲಿ ಮಾಡುವುದು. ಅಥವಾ ಎಸ್.ಎಫ್.ಸಿ. ಅನುದಾನದಿಂದ ಕಡಿತಗೊಳಿಸುವುದಕ್ಕೆ ಮಹಾನಗರ ಪಾಲಿಕೆಯು ತನ್ನ ಸಮ್ಮತವನ್ನು ಸರ್ಕಾರಕ್ಕೆ ನೀಡುವುದು.

6) ನೀರು ನಿರ್ವಹಣಾ ವ್ಯವಸ್ಥೆಯಡಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ನೌಕರರುಗಳು ಮಹಾನಗರ ಪಾಲಿಕೆಯಿಂದ ಅನ್ಯ ಸೇವೆಯ ಮೇಲೆ ನೀರು ನಿರ್ವಹಣಾ ಕಾರ್ಯವನ್ನು ಕ.ನ.ನೀ.ಸ. ಮತ್ತು ಒ.ಚ.ಮಂಡಳಿಯ ಅಧೀನದಲ್ಲಿ ಕಾರ್ಯನಿರ್ವಹಿಸುವುದು. ಸದರಿ ನೌಕರರ ಸಂಬಳವನ್ನು ಮಹಾನಗರ ಪಾಲಿಕೆ/ಜಲಮಂಡಳಿ (ನೀರಿನ ಕರ ವಸೂಲಿಯಿಂದ) ಪ್ರತಿ ತಿಂಗಳು ನೀಡುವುದು. ಪ್ರಸ್ತುತ ಅಗತ್ಯವಿರುವ ತಾಂತ್ರಿಕ ಮತ್ತು ತಾಂತ್ರಿಕವಲ್ಲದ ಸಿಬ್ಬಂದಿಯನ್ನು ಕ.ನ.ನೀ.ಸ.ಒ.ಚ.ಮಂಡಳಿಯು ಸುಸೂತ್ರ ನೀರು ಸರಬರಾಜು ನಿರ್ವಹಣೆಗೆ ನೇಮಿಸಿದ್ದಲ್ಲಿ ಸದರಿ ನೌಕರರನ್ನು ಮಹಾನಗರ ಪಾಲಿಕೆಯು ನೀರು ಸರಬರಾಜು ನಿರ್ವಹಣೆಯನ್ನು ಪುನಃ ಹಿಂದಕ್ಕೆ ಪಡೆಯುವಾಗ ಎಲ್ಲಾ ನಿರ್ವಹಣಾ ಸಿಬ್ಬಂದಿಯೊಂದಿಗೆ ಹಿಂದಕ್ಕೆ ಪಡೆಯುವುದು. ನೀರು ಸರಬರಾಜು ನಿರ್ವಹಣೆಯನ್ನು ಹಿಂದಕ್ಕೆ ಪಡೆಯಲು 3 ತಿಂಗಳ ನೋಟೀಸ್‌ನ್ನು ಮಹಾನಗರ ಪಾಲಿಕೆಯು ಪೂರಕವಾಗಿ ನೀಡಿ ಸರ್ಕಾರದ ಅನುಮೋದನೆ ಪಡೆಯತಕ್ಕದ್ದು.

7) ನೀರು ಸರಬರಾಜು ನಿರ್ವಹಣೆಯನ್ನು ಕ.ನ.ನೀ.ಸ.ಒ.ಚ.ಮಂಗೆ ಹಸ್ತಾಂತರಿಸಲು ಅಗತ್ಯವಿರುವ ಎಲ್ಲಾ ಕಾನೂನು ರೀತಿಯ ಕ್ರಮಗಳನ್ನು ಕೈಗೊಳ್ಳುವುದು. ನೀರು ಸರಬರಾಜು ನಿರ್ವಹಣೆಯನ್ನು ಗ್ರಾಹಕರವರೆವಿಗೆ ಸರಬರಾಜು ಮಾಡಲು ಅನುವಾಗುವಂತೆ ಅವಶ್ಯವಿರುವ ಉಪ–ವಿಭಾಗಗಳನ್ನು ಪ್ರಾರಂಭಿಸಲು ಪ್ರತ್ಯೇಕ ಕಟ್ಟಡದ ವ್ಯವಸ್ಥೆಯನ್ನು ಮಹಾನಗರ ಪಾಲಿಕೆಯು ಮಾಡುವುದು.

8) ನೀರು ಸರಬರಾಜು ವ್ಯವಸ್ಥೆಯಲ್ಲಿ ಅಳವಡಿಸಿರುವ ಎಲ್ಲಾ ವಿದ್ಯುತ್‌ಚ್ಛಕ್ತಿ ಬಿಲ್‌ಗಳನ್ನು ಮಹಾನಗರಪಾಲಿಕೆಯು ಭರಿಸತಕ್ಕದ್ದು.

9) ಗುಲ್ಬರ್ಗಾ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಯೋಜನೆಯನ್ನು ಅನುಷ್ಠಾನಗೊಳಿಸಲು ಪಡೆದಿರುವ ಸಾಲದ ಮೊತ್ತ ಮತ್ತು ಅದರ ಬಡ್ಡಿಯನ್ನು ಮಹಾನಗರಪಾಲಿಕೆ ಭರಿಸತಕ್ಕದ್ದು.

10) ಜಲಮಂಡಳಿಯು ಪ್ರಸ್ತುತ ಗುಲ್ಬರ್ಗಾ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ನೀರಿನ ಸಂಪರ್ಕಗಳಿಗೆ ಮೀಟರ್‌ಗಳನ್ನು ಅಳವಡಿಸುವುದು. ಒಂದು ವೇಳೆ ಅಕ್ರಮ ಸಂಪರ್ಕಗಳು ಕಂಡು ಬಂದಲ್ಲಿ, ಸದರಿ ಸಂಪರ್ಕಗಳಿಗೆ ಒಂದು ಬಾರಿ ನೀರು ಸಂಪರ್ಕಗಳಿಗೆ ವಿಧಿಸುವ ದರಗಳ ಮೇಲೆ ದಂಡವನ್ನು ವಿಧಿಸಿ ಸದರಿ ಸಂಪರ್ಕವನ್ನು ಸಕ್ರಮಗೊಳಿಸುವುದು. ನೀರಿನ ಕರಗಳನ್ನು ಸರ್ಕಾರವು ಆದೇಶ ಸಂಖ್ಯೆ:ನಅಇ07ಯುಡಬ್ಲ್ಯೂಎಸ್ 2011 ದಿನಾಂಕ: 20–7–2011ರಲ್ಲಿ ನಿಗದಿಪಡಿಸಿದಂತೆ ವಿಧಿಸಿ, ನೀರಿನ ಕರ ಬಾಕಿಯನ್ನು ವಸೂಲು ಮಾಡುವುದು. ನೀರು ಸರಬರಾಜು ನಿರ್ವಹಣೆಯಿಂದ ವಸೂಲಾದ ಮೊತ್ತದಲ್ಲಿ ಶೇ. 8ರಷ್ಟು ಮೊತ್ತವನ್ನು ಮಹಾನಗರ ಪಾಲಿಕೆಯು ಕ.ನ.ನೀಸ.ಒ.ಚ.ಮಂಡಳಿಗೆ ಪ್ರೋತ್ಸಾಹ ಧನವಾಗಿ ನೀಡುವುದು.

11) ಮಹಾನಗರಪಾಲಿಕೆಯು ನೀರು ನಿರ್ವಹಣಾ ವ್ಯವಸ್ಥೆಯ ಷರತ್ತು ಮತ್ತು ನಿಬಂಧನೆಗಳ ಬಗ್ಗೆ ಕ.ನ.ನೀ.ಸ.ಒ.ಚ.ಮಂಡಳಿಯೊಂದಿಗೆ ಮಾಡಿಕೊಂಡಿರುವ ಕರಡು ಒಪ್ಪಂದವನ್ನು ಮತ್ತು ಸರ್ಕಾರವು ವಿಧಿಸಿರುವ ಇತರೆ ಷರತ್ತುಗಳನ್ನೊಳಗೊಂಡಂತೆ ಅಳವಡಿಸಿಕೊಂಡು ಛಾಪಾ ಕಾಗದದ ಮೇಲೆ ಒಪ್ಪಂದ ಸಹಿ ಮಾಡುವುದು. ಸದರಿ ಒಪ್ಪಂದದಂತೆ ಮಹಾನಗರ ಪಾಲಿಕೆಯು ನಡೆದುಕೊಳ್ಳಲು ವಿಫಲವಾದಲ್ಲಿ ನೀರು ಸರಬರಾಜು ನಿರ್ವಹಣೆಯನ್ನು ಮಂಡಳಿಯು ಸರ್ಕಾರದ ಆದೇಶ ಸಂಖ್ಯೆ:ನಅಇ07ಯುಡಬ್ಲ್ಯೂಎಸ್ 2011 ದಿನಾಂಕ: 20–7–2011ರಲ್ಲಿ ರಚಿಸಿರುವ ಸಮಿತಿಯ ಮುಂದೆ ಪ್ರಸ್ತಾವನೆ ಸಲ್ಲಿಸಿ, ಸರ್ಕಾರದ ಅನುಮೋದನೆ ಪಡೆದ ನಂತರ ಹಿಂದಕ್ಕೆ ಹಸ್ತಾಂತರಿಸಬಹುದಾಗಿರುತ್ತದೆ.

**ಎಂ.ಎಂ. ಹಿರೇಮಠ**

ಪಿ.ಆರ್. 45

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಕೃತ ಜ್ಞಾಪನ

ಸಂಖ್ಯೆ: ಸಿಆಸುಇ 03 ರಾರಾಆ 2012 ಬೆಂಗಳೂರು, ದಿನಾಂಕ: 16–01–2012

**ವಿಷಯ :** ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ಸ್ವರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು ಮೌನ ಆಚರಿಸುವ ಬಗ್ಗೆ.

* * * * *

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣತೆತ್ತು ಹುತಾತ್ಮರಾದವರ ಸ್ವರಣಾರ್ಥವಾಗಿ ಪ್ರತಿವರ್ಷ ಜನವರಿ 30ರಂದು ಪೂರ್ವಾಹ್ನ 11–00 ಘಂಟೆಗೆ ಎಲ್ಲಾ ಕೆಲಸ ಕಾರ್ಯಗಳನ್ನು ಹಾಗೂ ಚಲನೆಯನ್ನು ಸ್ಥಗಿತಗೊಳಿಸಿ ಮೌನ ಆಚರಿಸುವಾಗ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಪ್ರತಿ ವರ್ಷವೂ ಸೂಚನೆಗಳನ್ನು ನೀಡಲಾಗುತ್ತಿದೆ. ಹುತಾತ್ಮರ ಸ್ವರಣಾರ್ಥವಾಗಿ ಜನವರಿ 30 ರಂದು ನಡೆಸುವ ಮೌನ ಆಚರಣೆಗೆ ಭಾರತ ಸರ್ಕಾರದ ಸೂಚನೆಗಳಂತೆ ಸ್ಥಾಯಿ ಸೂಚನೆಗಳನ್ನು ನೀಡಲಾಗಿದೆ.

1. ಜನವರಿ 30 ರಂದು ಪೂರ್ವಾಹ್ನ 11–00 ಘಂಟೆಗೆ ರಾಜ್ಯದಲ್ಲೆಡೆ ಎಲ್ಲಾ ಕೆಲಸ ಕಾರ್ಯಗಳನ್ನು ಮತ್ತು ಚಲನೆಯನ್ನು ಸ್ಥಗಿತಗೊಳಿಸಿ 2 ನಿಮಿಷಗಳ ಕಾಲ ಮೌನ ಆಚರಿಸುವುದು.
2. ಎಲ್ಲಿ ಸೈರನ್‌ಗಳು ಅಥವಾ ಸೈನಿಕರ ಬಂದೂಕುಗಳು ಲಭ್ಯ ಇವೆಯೋ ಅಂತಹ ಕಡೆಗೆ ಎರಡು ನಿಮಿಷಗಳು ಮೌನ ಆಚರಣೆಯ ಕಾಲವನ್ನು ಪ್ರಾರಂಭ ಮತ್ತು ಮುಕ್ತಾಯಕ್ಕೆ ಸೈರನ್ ಅಥವಾ ಸೈನಿಕರ ಬಂದೂಕುಗಳ ಶಬ್ದದ ಮೂಲಕ ಎರಡು ನಿಮಿಷ ಮೌನ ಆಚರಣೆ ಪೂರ್ವಾಹ್ನ 10.59 ರಿಂದ 11–00 ಘಂಟೆಯ ವರೆಗೆ ಸೈರನ್ : ಬಂದೂಕು ಶಬ್ದಮಾಡಿಸುವುದು. ಹಾಗೂ ಎರಡು ನಿಮಿಷದ ಮೌನ ಆಚರಣೆ ನಂತರ ಪುನಃ 11–02 ರಿಂದ 11–03 ನಿಮಿಷದವರೆಗೆ ಸೈರನ್ ಶಬ್ದವನ್ನು ಮಾಡಿಸುವುದು. ಈ ಪದ್ಧತಿಯನ್ನು ಸೈರನ್ ಸೌಲಭ್ಯವಿರುವ ಕಡೆ ಅಳವಡಿಸಿಕೊಳ್ಳುವುದು.
3. ಶಬ್ದವು (ಎಲ್ಲಿ ಲಭ್ಯ ಇದೆಯೋ ಅಲ್ಲಿ) ಕೇಳಿದ ಕೂಡಲೇ ಅಲ್ಲಿ ವ್ಯಕ್ತಿಗಳು ಆರಂಭದ ಸೂಚನೆಗಾಗಿ ನಿಂತುಕೊಳ್ಳಬೇಕು ಮತ್ತು ಮೌನವನ್ನು ಆಚರಿಸಬೇಕು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೊಠಡಿಯಲ್ಲಿ ಅಥವಾ ಇತರೆ ಯಾವುದೇ ಸ್ಥಳದಲ್ಲಿ ನಿಂತುಕೊಂಡು ಮೌನ ಆಚರಿಸುವುದಕ್ಕಿಂತ, ಒಂದು ವೇಳೆ ವ್ಯಕ್ತಿಗಳು ಒಂದು ಸ್ಥಳದಲ್ಲಿ ಮೌನ ಅಚರಿಸಿದರೆ ಅದು ತುಂಬಾ ಪರಿಣಾಮಕಾರಿಯಾಗಿ ಮತ್ತು ಪ್ರಭಾವಕಾರಿ (effective and impressive) ಆಗುತ್ತದೆ. ಆದಾಗ್ಯೂ ಕೆಲಸ ಕಾರ್ಯಗಳಿಗೆ ತೀವ್ರ ತೊಂದರೆ ಆಗುವಂತೆ ಇದ್ದರೆ ಮೇಲೆ ತಿಳಿಸಿದಂತೆ ಒಂದೇ ಸ್ಥಳದಲ್ಲಿ ಸೇರಲು ಪ್ರಯತ್ನಿಸದೇ ಇರಬಹುದು. ಈ 2 ನಿಮಿಷದಲ್ಲಿ ಎಲ್ಲಾ ವರ್ಕ್‌ಶಾಪ್‌ಗಳು ಮತ್ತು ಕಾರ್ಖಾನೆಗಳು ಕೆಲಸ ಸ್ಥಗಿತಗೊಳಿಸಬೇಕು. ಈ 2 ನಿಮಿಷದ ಅವಧಿಯಲ್ಲಿ ವರ್ಕ್‌ಶಾಪ್‌ಗಳು ಕಾರ್ಖಾನೆಗಳು ಪ್ರಸಾರ ಮಾಡುವುದನ್ನು ನಿಲ್ಲಿಸಬೇಕು, ಮತ್ತು ರಸ್ತೆಗಳಲ್ಲಿ ಸಂಚಾರ ಸ್ಥಗಿತಗೊಳಿಸಬೇಕು. ವಿಮಾನಗಳು, ಹಡಗುಗಳು, ರೈಲುಗಳು ಹೊರಡಲು 11.00 A.M. ನಿಗಧಿಪಡಿಸಿದ್ದಲ್ಲಿ ಅಂತಹುಗಳನ್ನು ಆಯ ನಿಲ್ದಾಣಗಳಲ್ಲಿ 2 ನಿಮಿಷಗಳು ತಡೆ ಹಿಡಿಯಬೇಕು.
4. ಸಂಕೇತ (Signal) ವ್ಯವಸ್ಥೆ ಇರದಂತಹ ಪ್ರದೇಶದಲ್ಲಿ, 11.00 A.M. ಗೆ 2 ನಿಮಿಷಗಳ ಮೌನ ಆಚರಿಸಲು ಸಂಬಂಧಪಟ್ಟವರಿಗೆಲ್ಲ ಸೂಕ್ತ ನಿರ್ದೇಶನವನ್ನು ಕಳುಹಿಸುವುದು.
5. ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾಧಿಕಾರಿಗಳು ವಿವರವಾದ ಕಾರ್ಯಕ್ರಮಗಳನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯುಳ್ಳವರಾಗಿರುತ್ತಾರೆ. (dis-oreation) 10.44 A.M. ರಿಂದ 10.56 A.M. ವರೆಗೆ (1) "ಸುಮಿರನ ಕರಲೆ ಮೇರೆ ಮನ್" (2) "ವೈಷ್ಣವೋ ಜನತೋ ತೇನೇ ಕಹಿಯೇ" ಮತ್ತು "ರಘುಪತಿ ರಾಘವ ರಾಜಾರಾಂ" ಈ ಕ್ರಮದಲ್ಲಿ 3 ಭಜನೆಗಳನ್ನು ಹಾಡಬೇಕು ಮತ್ತು ಈ ಕಾರ್ಯಕ್ರಮವು ಸಮಾರಂಭದ ಭಾಗ ಆಗಬಹುದು.
6. ಶಬ್ಧ ಮಾಡುವ ಬಗ್ಗೆ ಬಂದೂಕು ಹೊಡೆಯುವುದರಿಂದ ಅಥವಾ siron ಗಳನ್ನು ಬೆಂಗಳೂರಿನಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಇತರ ನಗರ ಪಟ್ಟಣಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸೂಕ್ತ ವ್ಯವಸ್ಥೆಗಳನ್ನು ಕರ್ನಾಟಕ ರಾಜ್ಯದ ಆರಕ್ಷಕ ಮಹಾನಿರೀಕ್ಷಕರು ಕ್ರಮ ತೆಗೆದುಕೊಳ್ಳುವುದು.

2. ಕೆಲವು ಕಛೇರಿಗಳಲ್ಲಿ ಈ 2 ನಿಮಿಷಗಳ ಮೌನ ಆಚರಣೆಯನ್ನು ಮಾಡುತ್ತಿರುವಾಗ ಸಾಮಾನ್ಯ ಜನತೆ ಈ ಮೌನ ಆಚರಣೆ ಸಂದರ್ಭದ ಪಾವಿತ್ರ್ಯತೆಯನ್ನು ಗಮನದಲ್ಲಿ ಇಡದೇ ತನ್ನ ಕಾರ್ಯದಲ್ಲಿ ನಿರತವಾಗುವುದನ್ನು ಗಮನಿಸಲಾಗಿದೆ. ಆದುದರಿಂದ ಹುತಾತ್ಮರ ದಿನಾಚರಣೆಯ ಸೂಕ್ತವಾಗಿ ಸಲ್ಲಿಸಬೇಕಾದ ಪಾವಿತ್ರ್ಯತೆ ಮತ್ತು ಸಾಮಾನ್ಯ ಜನತೆಯು ಭಾಗವಹಿಸುವುದರೊಡನೆ ಈ ಹುತಾತ್ಮರ ದಿನಾಚರಣೆಯನ್ನು ತಪ್ಪದೇ ಆಚರಿಸಬೇಕಾಗಿರುವ ಎಲ್ಲಾ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಸಂಬಂಧಪಟ್ಟ ಎಲ್ಲಾ ಪ್ರಾಧಿಕಾರಿಗಳಿಗೆ ಸೂಚಿಸಲಾಗಿದೆ. ಈ ಉದ್ದೇಶಕ್ಕಾಗಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಲಾಗಿದೆ.

1. ಹುತಾತ್ಮರ ದಿನವನ್ನು ಪೂರ್ಣ ಪಾವಿತ್ರ್ಯತೆ ಮತ್ತು ತಕ್ಕುದಾದ (befitting) ರೀತಿಯಲ್ಲಿ ಆಚರಿಸಲು ರಾಜ್ಯದ ಎಲ್ಲಾ ವಿದ್ಯಾ ಸಂಸ್ಥೆಗಳಿಗೆ ಸೂಚನೆಗಳನ್ನು ನೀಡುವುದು. ಈ ದಿನದ ವಿಶೇಷತ್ವಕ್ಕೆ (significance) ಸಂಬಂಧಿಸಿದಂತೆ ಭಾಷಣಗಳನ್ನು, ಅದರಲ್ಲೂ ವಿಶೇಷವಾಗಿ ಭಾರತದ ಸ್ವಾತಂತ್ರ್ಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ತಿಳಿಸುವಂತಹ ಭಾಷಣಗಳನ್ನು ಚರ್ಚೆಗಳನ್ನು (talks) ಏರ್ಪಡಿಸಬೇಕು. ಈ ಭಾಷಣಗಳ ಮುಖ್ಯಾಂಶಗಳಲ್ಲಿ ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ಉಳಿಸುವುದು, ಸಂರಕ್ಷಿಸುವುದು ಮತ್ತು ಶ್ರೀಮಂತಗೊಳಿಸುವುದಲ್ಲದೆ ರಾಷ್ಟ್ರದ ಐಕ್ಯತೆಯನ್ನು ಉತ್ತೇಜಿಸುವುದು (promote) ಮತ್ತು ಒಂದೇ ಗುರಿಗಳು ಮತ್ತು ಆದರ್ಶಗಳಿಗೆ (ideal) ಬದ್ಧರಾಗುವ ಅಂಶಗಳನ್ನೊಳಗೊಂಡಿರಬೇಕು.

2. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದವರ ಪಾತ್ರ ಮತ್ತು ರಾಷ್ಟ್ರೀಯ ಐಕ್ಯತೆಯ (National Integration) ಮೂಲ ಉದ್ದೇಶಗಳು ಇರುವ ಸಾಂಸ್ಕೃತಿಕ ಕಾರ್ಯಕ್ರಮಗಳು Documentary ಚಿತ್ರಗಳ ಪ್ರದರ್ಶನ : ಏರ್ಪಾಡುಗಳನ್ನು ರಾಜ್ಯದ ಪ್ರಚಾರ ಘಟಕಗಳು ಮಾಡಬಹುದು.
3. ಹುತಾತ್ಮರ ದಿನಾಚರಣೆಯನ್ನು ಸೂಕ್ತವಾಗಿ ಆಚರಿಸುವ ಬಗ್ಗೆ ತಮ್ಮ ಸದಸ್ಯರು ಹಾಗೂ ಸಂಯೋಜಿತ ಸಂಘ ಸಂಸ್ಥೆಗಳು ಹುತಾತ್ಮರ ದಿನಾಚರಣೆಯನ್ನು ಖಾತ್ರಿಯಾಗಿ ಸೂಕ್ತವಾಗಿ ಆಚರಿಸಬೇಕೆಂದು Chamber of Commerce ಮತ್ತು ಕೈಗಾರಿಕೆಗಳನ್ನು ಕೋರಬಹುದು.

3. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಎಲ್ಲಾ ಪ್ರಾದೇಶಿಕ ಆಯುಕ್ತರು, ಇಲಾಖಾ ಮುಖ್ಯಸ್ಥರು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಮತ್ತು ಮತ್ತಿತರೆ ಸಂಬಂಧಪಟ್ಟ ಅಧಿಕಾರಿಗಳು ಮೇಲೆ ಸೂಚಿಸಿರುವ ನಿರ್ದೇಶನಗಳನ್ನು ತಕ್ಕುದಾದ ರೀತಿಯಲ್ಲಿ ಅನುಸರಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕೋರಲಾಗಿದೆ.

**ವಿ. ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿ.ಆ.ಸು.ಇ (ರಾಜಕೀಯ)

ಪಿ.ಆರ್. ನಂ. 361

## ಕಂದಾಯ ಸಚಿವಾಲಯ

## ತಿದ್ದುಪಡಿ ಆದೇಶ

ಸಂಖ್ಯೆ: ಆರ್‌ಡಿ 671 ಎಲ್‌ಜಿಬಿ 2011 ಬೆಂಗಳೂರು ದಿನಾಂಕ: 11–01–2012.

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 367 ಎಲ್‌ಜಿಬಿ 2011 ದಿನಾಂಕ: 20–09–2011ರ ಆದೇಶದ ಭಾಗದಲ್ಲಿರುವ **ಶೈಕ್ಷಣಿಕ ಉದ್ದೇಶಕ್ಕಾಗಿ** ಎಂಬುದರ ಜೊತೆಗೆ **ಗುರುಪೀಠ ಸ್ಥಾಪನೆ, ಶೈಕ್ಷಣಿಕ ಸಂಸ್ಥೆಗಳು, ವಿದ್ಯಾರ್ಥಿ ನಿಲಯ, ಸಮುದಾಯ ಭವನ, ಧಾರ್ಮಿಕ ಚಟುವಟಿಕೆ, ಆಸ್ಪತ್ರೆ ನಿರ್ಮಾಣ, ಆರೋಗ್ಯ ಕೇಂದ್ರ ಮತ್ತು ಅಂಗವಿಕಲರಿಗೆ ಶಾಲೆ ಸ್ಥಾಪನೆಗಾಗಿ** ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್. ನಂ. 389

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ಕೆಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿ.ಪಿ.ಎ.ಆರ್. 247 ಎಸ್.ಎ.ಎಸ್. 2011, ದಿನಾಂಕ : 13–5–2011.
2. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ : ಡಿಎಸ್‌ಕೆ/ಸಿಬ್ಬಂದಿ/16/2010–11, ದಿನಾಂಕ : 16–7–2011.
3. ಟಿಪ್ಪಣಿ ಸಂಖ್ಯೆ : ಸಿಆಸುಇ 365 ಸೇಅಸೆ 2009, ದಿನಾಂಕ : 7–10–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿನ ದಿನಾಂಕ : 13–5–2011ರ ಸಿ.ಆ.ಸು.ಇಲಾಖೆ ಅಧಿಸೂಚನೆಯಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಗೆ ಶ್ರೀ ಕೆ.ಎಸ್. ಸತ್ಯಮೂರ್ತಿ, ಭಾ.ಆ.ಸೇ. ರವರನ್ನು ನೇಮಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ದಿನಾಂಕ : 16–7–2011 ರ ಪತ್ರದಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ದಿನಾಂಕ : 1–8–2011 ರಿಂದ 31–1–2012 ರವರೆವಿಗೆ ಅಥವಾ ಈ ಹುದ್ದೆಯನ್ನು ಪುನರ್ ಜೀವಿತಗೊಳಿಸುವವರೆವಿಗೆ (ಯಾವುದು ಮೊದಲೋ ಅಲ್ಲಿಯವರೆವಿಗೆ) ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶ ಹೊರಡಿಸಬೇಕೆಂದು ಆಯುಕ್ತರು ಕೋರಿದ್ದಾರೆ.

ಮೇಲೆ ಓದಲಾದ (3)ರಲ್ಲಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಸೇವೆಗಳು–1)ರವರ ದಿನಾಂಕ : 7–10–2011ರ ಟಿಪ್ಪಣಿಯಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ದಿನಾಂಕ : 1–8–2011 ರಿಂದ 31–1–2012 ರವರೆವಿಗೆ ಅಥವಾ ಹುದ್ದೆಯನ್ನು ಪುನರ್‌ಜೀವಿತಗೊಳಿಸುವವರೆಗೆ ಇದೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶ ಹೊರಡಿಸುವಂತೆ ತಿಳಿಸಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 146 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ : 24–11–2011**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಮೇರೆಗೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಹುದ್ದೆಯನ್ನು ದಿನಾಂಕ : 1–8–2011 ರಿಂದ 31–1–2012 ಅಥವಾ ಈ ಹುದ್ದೆಯನ್ನು ಪುನರ್‌ಜೀವಿತಗೊಳಿಸುವವರೆಗೆ ಇದೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗಿಳಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ : ಸಿಆಸುಇ 365 ಸೇಅಸೆ 2009, ದಿನಾಂಕ : 17–10–2011 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ (ಇಲಾಖೆ (ಸೇವೆಗಳು–ಎ) ಶಾಖೆಯು ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್, ಎಲ್.**
ಪೀಠಾಧಿಕಾರಿ (ಸಕ್ಕರೆ) ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 51

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಕಾರ್ಯದರ್ಶಿಗಳ ವ್ಯವಹಾರ ನಿರ್ವಹಣೆ ಕಾರ್ಯಗಳ ಮರು ಹಂಚಿಕೆ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಕಂಇ 9 ಬಿಎಂಎಂ 2003, ದಿನಾಂಕ:08.09.2005.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 9 ಬಿಎಂಎಂ 2003, ದಿನಾಂಕ:19.09.2006.
3. ಸರ್ಕಾರದ ಆದೇಶ ಸಂಖ್ಯೆ:ಕಂಇ 179 ಸಮಿತಿ 2010, ದಿನಾಂಕ:01.10.2010.
4. ಸರ್ಕಾರದ ಆದೇಶ ಸಂಖ್ಯೆ:ಕಂಇ 179 ಸಮಿತಿ 2010, ದಿನಾಂಕ:01.12.2010.
5. ಸರ್ಕಾರದ ಆದೇಶ ಸಂಖ್ಯೆ:ಕಂಇ 179 ಸಮಿತಿ 2010, ದಿನಾಂಕ:14.12.2010.
6. ಸರ್ಕಾರದ ಆದೇಶ ಸಂಖ್ಯೆ:ಕಂಇ 55 ಸಮಿತಿ 2011, ದಿನಾಂಕ:06.07.2011.

**ಪ್ರಸ್ತಾವನೆ:**

ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ ದಿನಾಂಕ:08.09.2005ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 9 ಬಿಎಂಎಂ 2003ರ ರೀತ್ಯ ರದ್ದು ಮಾಡಲಾದ ಕಂದಾಯ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಭೂ ಸುಧಾರಣೆ, ನೋಂದಣಿ ಮತ್ತು ಮುದ್ರಾಂಕ, ಮುಜರಾಯಿ ಹಾಗೂ ಭೂದಾಖಲೆಗಳು), ಹುದ್ದೆಯ ಪರಿಣಾಮವಾಗಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆಯ ಕಾರ್ಯದರ್ಶಿ (ವಿಪತ್ತು ನಿರ್ವಹಣೆ) ಹಾಗೂ ಕಂದಾಯ ಇಲಾಖೆಯ ವಿಶೇಷ ಕಾರ್ಯದರ್ಶಿ (ಭೂಮಿ), ಇವರುಗಳಿಗೆ ಆ ಆದೇಶದೊಂದಿಗೆ ಲಗತ್ತಿಸಿದ್ದ ಅನುಬಂಧ–1, 2 ಮತ್ತು 3ರಲ್ಲಿರುವಂತೆ ಕಂದಾಯ ಇಲಾಖೆಯ ಕಾರ್ಯ ನಿರ್ವಹಣೆಯನ್ನು ಮರುಹಂಚಿಕೆ ಮಾಡಿ ಆದೇಶ ಹೊರಡಿಸಲಾಗಿದೆ.

ತದನಂತರ, ಮೇಲೆ ಓದಲಾದ (3) ರಿಂದ (6) ರ ಸರ್ಕಾರಿ ಆದೇಶಗಳಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹಾಗೂ ಕಾರ್ಯದರ್ಶಿಗಳ ವ್ಯವಹಾರ ನಿರ್ವಹಣೆ ಕಾರ್ಯಗಳನ್ನು ಆಯಾ ಸಂದರ್ಭಗಳಿಗೆ ಅನುಸಾರವಾಗಿ ಮರು ಹಂಚಿಕೆ ಮಾಡಲಾಗಿರುತ್ತದೆ.

ಕಂದಾಯ ಇಲಾಖೆಯಲ್ಲಿರುವ ಕಾರ್ಯನಿರ್ವಹಣಾ ವಿಷಯಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹಾಗೂ ಕಾರ್ಯದರ್ಶಿಗಳಿಗೆ ಮರು ಹಂಚಿಕೆ ಮಾಡುವುದು ಅವಶ್ಯಕವೆಂದು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 20 ಸಮಿತಿ 2012, ಬೆಂಗಳೂರು, ದಿನಾಂಕ:25.01.2012**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕಂದಾಯ ಇಲಾಖೆಯಲ್ಲಿನ ಕಾರ್ಯಗಳು ಸುಗಮವಾಗಿ ನಡೆಯುವ ಉದ್ದೇಶದಿಂದ ಇಲಾಖೆಯ ಪ್ರಧಾನ ಕಾರ್ಯದರ್ಶಿ ಮತ್ತು ಕಾರ್ಯದರ್ಶಿಗಳ ನಡುವೆ ವ್ಯವಹಾರ ಕಾರ್ಯನಿರ್ವಹಣೆ ಹಂಚಿಕೆ ಕುರಿತು ಈ ಮೊದಲು ಹೊರಡಿಸಿದ್ದ ಎಲ್ಲಾ ಆದೇಶಗಳನ್ನು ರದ್ದುಪಡಿಸಿ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ–1, ಅನುಬಂಧ–2 ಮತ್ತು ಅನುಬಂಧ–3 ರಲ್ಲಿರುವಂತೆ ಕಂದಾಯ ಇಲಾಖೆಯ ಕಾರ್ಯ ನಿರ್ವಹಣೆ ವಿಷಯಗಳನ್ನು ಮರು ಹಂಚಿಕೆ ಮಾಡಿ ಈ ಮೂಲಕ ಆದೇಶಿಸಿದೆ.

2. ಸರ್ಕಾರದ ಕಾರ್ಯದರ್ಶಿ (ವಿಪತ್ತು ನಿರ್ವಹಣೆ), ಕಂದಾಯ ಇಲಾಖೆ, ಇವರು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಪೂರ್ಣ ಮೇಲ್ವಿಚಾರಣೆ ಮತ್ತು ಆಡಳಿತಾಧೀನದಲ್ಲಿ ಕಾರ್ಯನಿರ್ವಹಿಸುವುದು. ಅವರಿಗೆ ಹಂಚಿಕೆ ಮಾಡಲಾದ ವಿಷಯಗಳಿಗೆ ಸಂಬಂಧಿಸಿದ ಕಡತಗಳನ್ನು ಮಾನ್ಯ ಸಚಿವರಿಗೆ ನೇರವಾಗಿ ಸಲ್ಲಿಸಬಹುದು. ಆದರೆ ಅವರ ವ್ಯಾಪ್ತಿಯಲ್ಲಿ ಹೊರಡಿಸುವ ಎಲ್ಲಾ ಆದೇಶಗಳ ಪ್ರತಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ತಪ್ಪದೇ ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಅಶೋಕ್ ಕುಮಾರ್ ಸಿ. ಮನೋಳಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

## ಅನುಬಂಧ–1

**ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆರವರ ಕಾರ್ಯನಿರ್ವಹಣೆ ವಿಷಯಗಳು**

1. ಪ್ರಾದೇಶಿಕ ಆಯುಕ್ತರು, ಜಿಲ್ಲಾಧಿಕಾರಿಗಳು, ವಿಶೇಷ ಜಿಲ್ಲಾಧಿಕಾರಿಗಳು, ಉಪ ವಿಭಾಗಾಧಿಕಾರಿಗಳ, ತಹಶೀಲ್ದಾರರುಗಳ ಅಧಿಕಾರ ನಿಯೋಜನೆ ವಿಷಯಗಳು.
2. ತಹಶೀಲ್ದಾರರ ಎಲ್ಲಾ ಸೇವಾ ವಿಷಯಗಳು.
3. ಭೂ ಮಂಜೂರಾತಿ, ಭೂ ಪರಿವರ್ತನೆ, ಪಿಟಿಸಿಎಲ್ ಪ್ರಕರಣಗಳು, ಭೂ ಕಂದಾಯ ಕಾಯಿದೆ ಮತ್ತು ನಿಯಮಾವಳಿಗಳ ಅಡಿ ಒತ್ತುವರಿಯನ್ನು ತೆರವುಗೊಳಿಸುವ ಎಲ್ಲಾ ವಿಷಯಗಳು.
4. ಭೂಸ್ವಾಧೀನತೆಯ ಎಲ್ಲಾ ವಿಷಯಗಳು.
5. ಭೂ ಮಾಪನ ಮತ್ತು ಭೂ ದಾಖಲೆಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
6. ಪುನರ್ ವ್ಯವಸ್ಥೆ ಮತ್ತು ಪುನರ್ವಸತಿಗೆ (ಕೃಷ್ಣ ಮೇಲ್ದಂಡೆ ಯೋಜನೆ, ಸೀಬರ್ಡ್, ಇತ್ಯಾದಿ) ಸಂಬಂಧಿಸಿದ ಎಲ್ಲಾ ವಿಷಯಗಳು.
7. ವಿವಿಧ ಮಂಡಳಿ / ಪ್ರಾಧಿಕಾರಗಳು ಅಂದರೆ ಕೂಡಲ ಸಂಗಮ ಅಭಿವೃದ್ಧಿ ಮಂಡಳಿ, ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ, ಬಾಗಲಕೋಟೆ ಅಭಿವೃದ್ಧಿ ಮಂಡಳಿ ಇತ್ಯಾದಿಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
8. ಕಾಗಿನೆಲೆ ಅಭಿವೃದ್ಧಿ, ಸೊನ್ನತಿ ಅಭಿವೃದ್ಧಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು ಅಭಿವೃದ್ಧಿಗಳ ಮಾಸ್ಟರ್ ಯೋಜನೆ.
9. ಕರ್ನಾಟಕ ಭೂ ಸುಧಾರಣೆ ಕಾಯಿದೆ ಮತ್ತು ನಿಯಮಗಳು ಮತ್ತು ಇನಾಂಗಳ ಬಗೆಗಿನ ಎಲ್ಲಾ ವಿಷಯಗಳು.
10. ಪ್ರಾದೇಶಿಕ ಆಯುಕ್ತರು / ಜಿಲ್ಲಾಧಿಕಾರಿಗಳ ಪ್ರವಾಸ ಟಿಪ್ಪಣಿಯ ಪರಿಷ್ಕರಣೆ ಮತ್ತು ಪ್ರಾದೇಶಿಕ ಆಯುಕ್ತರು / ಜಿಲ್ಲಾಧಿಕಾರಿಗಳ ಸಮ್ಮೇಳನದ ಟಿಪ್ಪಣಿಗಳ ಪರಿಷ್ಕರಣೆ.

11. ಕಂದಾಯ ಇಲಾಖೆಯ (ಸಮನ್ವಯ) ವ್ಯವಸ್ಥೆ ಮತ್ತು ನಿರ್ವಹಣೆ.
12. ಕಂದಾಯ ಕಚೇರಿಗಳು ಅಂದರೆ ಕಂದಾಯ ಭವನ, ಮಿನಿ ವಿಧಾನಸೌಧ, ಇತ್ಯಾದಿಗಳ ನಿರ್ಮಾಣ.
13. ಕಂದಾಯ ಇಲಾಖೆ ಕಚೇರಿಗಳಿಗೆ ವಾಹನಗಳನ್ನು ಒದಗಿಸುವುದು.
14. ಕಚೇರಿಗಳ ಆಧುನೀಕರಣ / ಕಂದಾಯ ಆಡಳಿತದ ಬಲವರ್ಧನೆ.
15. ನಾಡ ಕಚೇರಿ ಬಗೆಗಿನ ವಿಷಯಗಳು.
16. ಎನ್.ಎಸ್.ಎ.ಪಿ./ಸಮಾಜಿಕ ಭದ್ರತಾ ಪಿಂಚಣಿಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
17. ಕರ್ನಾಟಕ ಬಾಡಿಗೆ ಕಾಯಿದೆ, ಕರ್ನಾಟಕ ಸಾರ್ವಜನಿಕ ಆವರಣ ಕಾಯಿದೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು.
18. ರೋರಿಖ್ ಎಸ್ಟೇಟ್‌ಗೆ ಸಂಬಂಧಿಸಿದ ವಿಷಯಗಳು.
19. ಕಂದಾಯ ವಾರ್ತೆ ಮಾಸಿಕ ಪತ್ರ ಪ್ರಕಟಣೆ.
20. ಕಂದಾಯ ಇಲಾಖೆಯ ಆಡಳಿತ ವಿಧಾನಗಳ ಬಗ್ಗೆ ಸಂಕ್ಷಿಪ್ತ ವರದಿಯನ್ನು ಕಂದಾಯ ಸಚಿವರಿಗೆ ಸಲ್ಲಿಸುವುದು.
21. ಪ್ರಧಾನ ಕಾರ್ಯದರ್ಶಿಗಳು ನಿರ್ವಹಿಸುವ ವಿಷಯಗಳ ಬಗ್ಗೆ ಎಲ್ಲಾ ವಿಧಾನ ಮಂಡಲದ / ವಿಧಾನ ಪರಿಷತ್ತಿನ ವಿಷಯಗಳು, ರಾಜ್ಯ ಸಭೆ ಲೋಕಸಭೆ ಪ್ರಕರಣಗಳು, ರಾಜ್ಯ ವಿಧಾನ ಮಂಡಲದ ಸಮಿತಿಯ ವಿಷಯಗಳು.
22. ವಿಶೇಷ ಕೋಶಗಳು.
23. ಕಂದಾಯ ಸಂಹಿತೆ.
24. ನ್ಯಾಯಾಲಯದ ಪ್ರಕರಣಗಳನ್ನು ಒಳಗೊಂಡಂತೆ ಕಂದಾಯ ಇಲಾಖೆಯ ಗಣಕೀಕರಣ.
25. ಎಫ್.ಎಂ.ಎಸ್. ಮತ್ತು ಎಲ್.ಎಂ.ಎಸ್. ನ ಪರಿಶೀಲನೆ.
26. ವಿವಿಧ ಕಾಯಿದೆ ಮತ್ತು ನಿಯಮಾವಳಿಗಳ ತಿದ್ದುಪಡಿ ಮತ್ತು ಇತರೆ ನೀತಿ ವಿಷಯಗಳ ಪ್ರಸ್ತಾವನೆಗಳು.
27. ಇತರೆ ವಿಷಯಗಳು:
    ಎ) ರಾಜ್ಯ ಹೆಸರಿಸುವ ಪ್ರಾಧಿಕಾರ.
    ಬಿ) ಕರ್ನಾಟಕ ಮೇಲ್ಮನವಿ ಪ್ರಾಧಿಕಾರ.
    ಸಿ) ಲೆಕ್ಕ ಪತ್ರಗಳ ಸಮನ್ವಯ.
    ಡಿ) ಆಯವ್ಯಯ ಭಾಷಣ, ರಾಜ್ಯಪಾಲರ ಭಾಷಣ, ವಾರ್ಷಿಕ ವರದಿ ಮತ್ತು ಅನುಸರಣಾ ವರದಿಗಳು.
    ಇ) ಆರ್ಥಿಕ ಆಯೋಗಕ್ಕೆ ಸಂಬಂಧಿಸಿದ ವಿಷಯಗಳು.
    ಎಫ್) ಆಡಿಟ್, ವೆಚ್ಚ ಮತ್ತು ತನಿಖಾ ವರದಿ.
    ಜಿ) ಆಸ್ತಿಯನ್ನು ತೆರವುಗೊಳಿಸುವ ವಿಷಯಗಳು, ಸಾರ್ವಜನಿಕ ಆವರಣಗಳನ್ನು ತೆರವುಗೊಳಿಸುವುದು ಮತ್ತು ಫೀಲ್ಡ್ ಮತ್ತು ಆರ್ಟಿಲರಿ ಕಾಯಿದೆ, ಟ್ರೆಜರಿ ಟ್ರೋವ್ ಕಾಯಿದೆ.
28. ಕಾರ್ಯದರ್ಶಿ (ವಿಪತ್ತು ನಿರ್ವಹಣೆ) ಕಂದಾಯ ಇಲಾಖೆ ಮತ್ತು ಕಾರ್ಯದರ್ಶಿ (ಭೂಮಿ), ಕಂದಾಯ ಇಲಾಖೆ ಇವರಿಗೆ ಹಂಚಿಕೆ ಮಾಡದೇ ಇರುವ ಬೇರೆ ಯಾವುದೇ ವಿಷಯಗಳು.

**ಅಶೋಕ್ ಕುಮಾರ್ ಸಿ. ಮನೋಳಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

## ಅನುಬಂಧ–2

### ಕಂದಾಯ ಇಲಾಖೆಯ ಕಾರ್ಯದರ್ಶಿ (ವಿಪತ್ತು ನಿರ್ವಹಣೆ) ರವರ ಕಾರ್ಯನಿರ್ವಹಣೆ ವಿಷಯಗಳು

1. ಮಳೆ/ಅಭಾವ/ಬರ/ನೆರೆ ಪರಿಹಾರ ಮತ್ತು ಇತರೆ ಸ್ವಾಭಾವಿಕ ವಿಪತ್ತಿನ ಆಕಸ್ಮಿಕ ಬೆಂಕಿ/ವೆಚ್ಚದ ತ:ಖ್ತೆ/ಕೋಮು ಗಲಭೆ ಸಂತ್ರಸ್ತರಿಗೆ ಬಡ್ಡಿ ರಹಿತ ಉಚಿತ ಸಾಲ, ಋತುಮಾನ ಪರಿಸ್ಥಿತಿ, ಬಗೆಗಿನ ಎಲ್ಲಾ ವಿಷಯಗಳು.
2. ಧಾರ್ಮಿಕ ಸಂಸ್ಥೆ ಮತ್ತು ದತ್ತಿ ಸಂಸ್ಥೆಗಳ ಎಲ್ಲಾ ವಿಷಯಗಳು.
3. ನೋಂದಣಿ ಮತ್ತು ಮುದ್ರಾಂಕ.
4. ಎಲ್ಲ ರೀತಿಯ ಗಣತಿಗೆ ಸಂಬಂಧಿಸಿದ ವಿಷಯಗಳು (ಜನಗಣತಿ, ಜಾನುವಾರು ಗಣತಿ, ಕೃಷಿ ಗಣತಿ ಇತ್ಯಾದಿ).
5. ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆಯವರು ವಹಿಸುವ ಯಾವುದೇ ಇತರೆ ವಿಷಯಗಳು.

**(ಅಶೋಕ್ ಕುಮಾರ್ ಸಿ. ಮನೋಳಿ)**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

## ಅನುಬಂಧ–3

**ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ (ಭೂಮಿ ಮತ್ತು ನಗರಾಸ್ತಿ ಮಾಲೀಕತ್ವದ ದಾಖಲೆಗಳು) ರವರ ಕಾರ್ಯ ನಿರ್ವಹಣೆ ವಿಷಯಗಳು**

1. ಪೋಡಿ ದಾಖಲೆಗಳು ಸೇರಿದಂತೆ ಭೂದಾಖಲೆಗಳ ಗಣಕೀಕರಣ.
2. ಭೂಮಿ.
3. VSAT ನ Establishment ಸ್ಥಾಪನೆ.
4. ಭೂಮಿಯನ್ನು ಕಾವೇರಿ ಜೊತೆ ಸಂಪರ್ಕ ಮಾಡುವ ಬಗ್ಗೆ.
5. ಭೂ ದಾಖಲೆಗಳನ್ನು ಸ್ಕ್ಯಾನಿಂಗ್ ಮಾಡುವ ಬಗ್ಗೆ.
6. ಗ್ರಾಮೀಣ ನಕ್ಷೆಗಳ ಡಿಜಿಟೈಸೇಷನ್.
7. ಟಿಪ್ಪಣಿಗಳ ಸ್ಕ್ಯಾನಿಂಗ್.
8. ಗ್ರಾಮ ನಕ್ಷೆಗಳ ಲ್ಯಾಮಿನೇಷನ್.
9. ನಗರ ಸರ್ವೆ ಮತ್ತು ಕೃಷಿಯೇತರ ಭೂಮಿ ಡಾಟಗಳ ಗಣಕೀಕರಣ.
10. ಗ್ರಾಮೀಣ ಡಿಜಿಟಲ್ ಸೇವೆ.
11. ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ವಹಿಸುವ ಯಾವುದೇ ಇತರ ವಿಷಯಗಳು.

**ಅಶೋಕ್ ಕುಮಾರ್ ಸಿ. ಮನೋಳಿ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

ಪಿ.ಆರ್. 409

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಚಿತ್ರದುರ್ಗ ನಗರಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 9608.00 ಲಕ್ಷಗಳಲ್ಲಿ ಕಲ್ಪಿಸುವ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳೀ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ : ಮುಅ/ಆಶ್ರೇಕಾಅ(ಬೆಂ)/ತಾಸ–8/ಸಅ–11/ಚಿತ್ರದುರ್ಗ/ಒಚಯೋ/ 3125/2010–11, ದಿನಾಂಕ: 30–11–2011.
2. ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಬ್ಲ್ಯೂಎಸ್ 2011, ಬೆಂಗಳೂರು, ದಿನಾಂಕ : 20–7–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಚಿತ್ರದುರ್ಗ ನಗರಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 9608.00 ಲಕ್ಷಗಳಲ್ಲಿ ಕಲ್ಪಿಸಲು ಸರ್ಕರದ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಚಿತ್ರದುರ್ಗ ನಗರವು ಜಿಲ್ಲಾ ಕೇಂದ್ರವಾಗಿದ್ದು, 2001ರ ಜನಗಣತಿಯ ಪ್ರಕಾರ 1,25,770 ಇದ್ದು ಪ್ರಸ್ತುತ 1,60,000 ಇರುತ್ತದೆ. ಈ ನಗರದ ಜನಸಂಖ್ಯೆಯು 2028 ರಲ್ಲಿ 2,62,200 ಮತ್ತು 2043 ಕ್ಕೆ 3,69,600 ಆಗಬಹುದೆಂದು ಅಂದಾಜಿಸಲಾಗಿದೆ. ಹಾಲಿ ಈ ನಗರಕ್ಕೆ ಎರಡು ಹಂತಗಳಲ್ಲಿ ವೇದಾವತಿ ನದಿಯನ್ನು ಮೂಲವಾಗಿಟ್ಟುಕೊಂಡು, 1956 ಮತ್ತು ಶಾಂತಿಸಾಗರವನ್ನು ಮೂಲವಾಗಿಟ್ಟುಕೊಂಡು 2008ರಲ್ಲಿ ನೀರು ಸರಬರಾಜು ಯೋಜನೆಯನ್ನು ಕಾರ್ಯಗತಗೊಳಿಸಲಾಗಿದೆ. ಈ ಯೋಜನೆಯಿಂದ 2015ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ 26 ದಶಲಕ್ಷ ಲೀಟರ್ ಹಾಗೂ 2033 ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ 43 ದಶಲಕ್ಷ ಲೀಟರ್ ನೀರನ್ನು ಒದಗಿಸಲು ಅನುವು ಮಾಡಲಾಗಿದೆ. ಹಾಲಿ ನಗರಕ್ಕೆ ತಲಾ ದಿನಂಪ್ರತಿ 135 ಲೀಟರ್‌ನಂತೆ ನೀರು ಸರಬರಾಜು ಮಾಡಲಾಗುತ್ತಿದೆ.

ಪ್ರಸ್ತುತ ನಗರದಲ್ಲಿ ಒಳಚರಂಡಿ ವ್ಯವಸ್ಥೆಯನ್ನು 1955ರಲ್ಲಿ ಅಳವಡಿಸಲಾಗಿದ್ದು, ಶೇಕಡ 25 ರಷ್ಟು ಭಾಗದಲ್ಲಿ ಈ ವ್ಯವಸ್ಥೆ ಇರುತ್ತದೆ ಮತ್ತು ಈ ವ್ಯವಸ್ಥೆಯು ಸುಮಾರು 54 ವರ್ಷಗಳಷ್ಟು ಹಳೆಯದಾಗಿದ್ದು, ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗದೇ ಮಲೀನ ನೀರನ್ನು ಚರಂಡಿಗಳಿಗೆ ಹರಿಯಲು ಬಿಡಲಾಗುತ್ತಿದೆ. ನಗರ ಸುತ್ತಲು ಹೊಸ ಬಡಾವಣೆಗಳು ನಿರ್ಮಾಣವಾಗಿದ್ದು, ನಗರದ ಸ್ವಚ್ಚತೆ ಹಾಗೂ ನೈರ್ಮಲ್ಯತೆಯನ್ನು ಕಾಪಾಡಲು ಸುವ್ಯವಸ್ಥಿತವಾದ ಒಳಚರಂಡಿ ಯೋಜನೆಯನ್ನು ಕಲ್ಪಿಸುವುದು ಅವಶ್ಯವಾಗಿರುತ್ತದೆ.

ಚಿತ್ರದುರ್ಗ ನಗರಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ರೂ. 9608.00 ಲಕ್ಷಗಳಿಗೆ 2010–11ನೇ ಸಾಲಿನಲ್ಲಿ ಚಾಲ್ತಿಯಲ್ಲಿರುವ ದರಪಟ್ಟಿಯನ್ವಯ ಅಂದಾಜು ಪಟ್ಟಿ ತಯಾರಿಸಿದ್ದು ದಿನಾಂಕ : 11–10–2010 ರಂದು ನಡೆದ ಚಿತ್ರದುರ್ಗ ನಗರ ಸಭೆಯ ವಿಷಯ ಸಂಖ್ಯೆ : 29 ರಲ್ಲಿ ಸದರಿ ಅಂದಾಜು ಪಟ್ಟಿಗೆ ಮತ್ತು ನಗರಸಭೆಯು ಶೇಕಡ 25 ರಷ್ಟು ಮೊತ್ತವನ್ನು ನೀಡಲು ನಿರ್ಣಯಿಸಲಾಗಿದೆ ಮತ್ತು ನಗರ ಸಭೆಯು ದಿನಾಂಕ : 11–11–2010 ರ ಪತ್ರದಲ್ಲಿ ಸದರಿ ಅಂದಾಜುಪಟ್ಟಿಗೆ ಮೇಲು ರುಜು ಸಹ ಮಾಡಿ ಸಲ್ಲಿಸಿರುತ್ತದೆ. ಈ ಬಗ್ಗೆ ಪೌರಾಯುಕ್ತ ನಗರಸಭೆ, ಚಿತ್ರದುರ್ಗ ಹಾಗೂ ಕಾರ್ಯಪಾಲಕ ಅಭಿಯಂತರರು, ಚಿತ್ರದುರ್ಗ ಇವರು ಒಪ್ಪಂದವನ್ನು ಸಹ ಮಾಡಿಕೊಂಡಿರುತ್ತಾರೆ. ಅದರಂತೆ ಕಾಮಗಾರಿಗಳನ್ನು ಪ್ರಾರಂಭಗೊಳಿಸಿದ ದಿನಾಂಕದಿಂದ, 36 ತಿಂಗಳೊಳಗಾಗಿ ಪೂರ್ಣಗೊಳಿಸಲು ಉಭಯ ಕಕ್ಷಿದಾರರು ಒಪ್ಪಿ ರುಜು ಮಾಡಿರುತ್ತಾರೆ.

ಯೋಜನೆಯನ್ನು 2043ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ ತಲಾ ದಿನಂಪ್ರತಿ 135 ಲೀಟರ್ ನೀರು ಸರಬರಾಜಿಗೆ ಅನುಗುಣವಾಗಿ ತಲಾದಿನಂಪ್ರತಿ 110 ಲೀಟರ್ ಗ್ರಾಮಸಾರವೆಂದು ಪರಿಗಣಿಸಿ, ಯೋಜನೆಯನ್ನು ವಿನ್ಯಾಸಿಸಲಾಗಿದೆ. ಯೋಜನೆಯಲ್ಲಿ ಕೊಳವೆ ಮಾರ್ಗ ಆಳಗುಂಡಿಗಳನ್ನು ನಿರ್ಮಿಸಲು ಉದ್ದೇಶಿಸಿದ್ದು, ಗ್ರಾಮಸಾರ ಶುದ್ಧೀಕರಣ ಘಟಕವನ್ನು ನಿರ್ಮಿಸಲು ಅನುವು ಮಾಡಲಾಗಿದೆ. ಮೂರು ವೆಟ್‌ವೆಲ್‌ಗಳನ್ನು ಹಾಗೂ ವೆಟ್‌ವೆಲ್‌ಗಳಲ್ಲಿ ವಿವಿಧ ಸಾಮರ್ಥ್ಯದ ವಿದ್ಯುತ್ ಯಂತ್ರಗಳನ್ನು ಅಳವಡಿಸಲು ಉದ್ದೇಶಿಸಲಾಗಿದೆ. ಈ ಯೋಜನೆಯಡಿ ಸುಮಾರು 20,000 ಮನೆಗಳಿಗೆ ಒಳಚರಂಡಿ ಜೋಡಿಕೆ ಕಾಮಗಾರಿಗೆ ಅವಕಾಶ ಕಲ್ಪಿಸಲಾಗಿದೆ. ಈ ಯೋಜನೆಯನ್ನು 2010–11ನೇ ಸಾಲಿನ ಮಂಡಳೀಯ ಹಾಗೂ ಲೋಕೋಪಯೋಗಿ ಇಲಾಖೆಯ ದರಪಟ್ಟಿಯನ್ನು ಆಧರಿಸಿ ತಯಾರಿಸಲಾಗಿದೆ.

ಪ್ರಸ್ತುತ ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಲಾಗುತ್ತಿದ್ದು, ಸದರಿ ಸ್ಥಳೀಯ ಸಂಸ್ಥೆಗಳಲ್ಲಿನ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲೀನ ನೀರು ನದಿಗಳನ್ನು/ಅಂತರ್ಜಲ ನೀರನ್ನು ಕಲುಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಿಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಸರ್ಕಾರದ ಆದೇಶ ಸಂಖ್ಯೆ ನಅಇ 07 ಯುಡಬ್ಲ್ಯೂಎಸ್ 2011, ದಿನಾಂಕ : 20–7–2011 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ, ಆದೇಶಿಸಿರುತ್ತದೆ. ಸದರಿ ಆದೇಶದನ್ವಯ ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ.

| | | |
|---|---|---|
| 1. | ಸರ್ಕಾರದ ಅನುದಾನ–ಶೇ 70 | ರೂ. 6725.60 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಗಳಿಂದ ಸಾಲ–ಶೇ 20 | ರೂ. 1921.60 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆಯ ಕೊಡುಗೆ–ಶೇ 10 | ರೂ. 960.80 ಲಕ್ಷಗಳು |
| | ಒಟ್ಟು | ರೂ. 9608.00 ಲಕ್ಷಗಳು |

ಸದರಿ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಪರಿಷ್ಕೃತ ಕ್ರಿಯಾ ಯೋಜನೆಯಲ್ಲಿ ಸೇರಿಸಿ, ಪ್ರಸ್ತುತ ಸಾಲಿನಲ್ಲಿ ಈ ಯೋಜನೆಗೆ ರೂ. 3203.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಚಿತ್ರದುರ್ಗ ಪುರಸಭೆಯು ದಿನಾಂಕ : 11–10–2010 ರಂದು ನಡೆದ ಸಭೆಯಲ್ಲಿ ಒಳಚರಂಡಿ ಯೋಜನೆಯನ್ನು ಕಲ್ಪಿಸಲು ಯೋಜನೆಯ ಆರ್ಥಿಕ ಮಾದರಿಯನ್ವಯ ತನ್ನ ಪಾಲಿನ ಮೊತ್ತವನ್ನು ಭರಿಸಲು ಮತ್ತು ಸಾಲವನ್ನು ಹಿಂದಿರುಗಿಸಲು ಠರಾವು ಪಾಸು ಮಾಡಿರುತ್ತದೆ.

ಈ ಯೋಜನೆಯ ಅಂದಾಜಿನಲ್ಲಿ ಇಟಿಪಿ ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ 5%ಕ್ಕೆ ನಿಗದಿಗೊಳಿಸಲಾಗಿದೆ. ಹಾಗೂ ಇತರೆ ಇಲಾಖೆಗಳಿಗೆ ಸಲ್ಲಿಸಬೇಕಾಗಿರುವ ಠೇವಣಿಗಳನ್ನು ಹಾಗೂ ಭೂ ಸ್ವಾಧೀನ ವೆಚ್ಚವನ್ನು ಸೇರಿಸಿ ಯೋಜನೆಯ ಅಂದಾಜನ್ನು ರೂ. 9608.00 ಲಕ್ಷಗಳಿಂದ ರೂ. 7847.00 ಲಕ್ಷಗಳಿಗೆ ಮಿತಿಗೊಳಿಸಿ ಅನುಮೋದನೆ ನೀಡಬಹುದಾಗಿರುತ್ತದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 11 ಯುಡಿಎಸ್ 2010, ಬೆಂಗಳೂರು, ದಿನಾಂಕ : 15–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 7847.00 ಲಕ್ಷಗಳಲ್ಲಿ (ರೂ. ಏಳು ಸಾವಿರದ ಎಂಟುನೂರು ನಲವತ್ತೇಳು ಲಕ್ಷ ಮಾತ್ರ) ಕಲ್ಪಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate is reduced to such extent.
2. The board shall invite the tender immediately after the handing over of the land required under the scheme in order to avoid time and cost run over.
3. The consent of th ULB shall be obtained for the extra cost that might occur due to deviations, extra item works or variations in the scheme.
4. Adequate provision to be made by the Board in the following Years for timely completion of the Project.
5. Escalations and Tender premium over and above the approved estimate cost should be approved with the prior consent of the ULB & Govt.
6. Water rates as proposed by KUWS & DB have to be implemented to meet O & M cost of UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 108 Exp-9/2011, ದಿನಾಂಕ : 8–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 46

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಲಕ್ಷ್ಮೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಅಂದಾಜು ರೂ. 2200.00 ಲಕ್ಷಗಳಲ್ಲಿ ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮಂ : ಮುಅ/ಆಶ್ರೇಕಾಅ(ಬೆಂ)/ಉಮುಅ–1/ಲಕ್ಷ್ಮೇಶ್ವರ–ಒಚಯೋ/ 4158/2010–11, ದಿನಾಂಕ: 3–3–2011.

2. ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಬ್ಲ್ಯೂಎಸ್ 2011, ಬೆಂಗಳೂರು, ದಿನಾಂಕ : 20–7–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು ಲಕ್ಷ್ಮೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 2200.00 ಲಕ್ಷಗಳಲ್ಲಿ ಕಲ್ಪಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಲಕ್ಷ್ಮೇಶ್ವರ ಪಟ್ಟಣವು ಗದಗ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ ಪಟ್ಟಣದ ಜನಸಂಖ್ಯೆಯು 33,411 ಇದ್ದು 2026ಕ್ಕೆ 44,000 ಹಾಗೂ 2041ಕ್ಕೆ 50,000 ಆಗಬಹುದೆಂದು ನಿರೀಕ್ಷಿಸಲಾಗಿದೆ. ಈ ಪಟ್ಟಣಕ್ಕೆ ತುಂಗಾಭದ್ರಾ ನದಿ ಮೂಲದಿಂದ ತ್ವರಿತ ನೀರು

ಸರಬರಾಜು ಯೋಜನೆಯಡಿ ರೂ. 1519.61 ಲಕ್ಷಗಳ ಅಂದಾಜಿನಲ್ಲಿ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು 2004ರಲ್ಲಿ ಚಾಲನೆಗೊಳಿಸಲಾಯಿತ್ತು. ಹಾಲಿ ತಲಾ ದಿನಂಪ್ರತಿ 100 ಲೀಟರ್ ನಂತೆ ನೀರು ಸರಬರಾಜು ಮಾಡಲಾಗುತ್ತಿದೆ. ಪ್ರಸ್ತುತ ಸ್ಥಳೀಯ ಸಂಸ್ಥೆಯು ಸದರಿ ನೀರು ಸರಬರಾಜು ಯೋಜನೆಯನ್ನು ನಿರ್ವಹಿಸುತ್ತಿದೆ.

ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸಿರುವುದಿಲ್ಲ. ಪಟ್ಟಣದ ನಾಗರೀಕರು ತ್ಯಾಜ್ಯ ನೀರನ್ನು ನಾಲೆಗಳ ಮೂಲಕ ಮತ್ತು ತೆರೆದ ಚರಂಡಿಗಳ ಮೂಲಕ ಹರಿದುಬಿಡುತ್ತಿದ್ದು. ಪಟ್ಟಣದ ವಾತಾವರಣ ಕಲುಷಿತಗೊಳ್ಳುತ್ತಿದೆ ಮತ್ತು ನಾಗರೀಕರ ಆರೋಗ್ಯದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವುದು ಅನಿವಾರ್ಯವಾಗಿದೆ.

ಮೇಲಿನ ಯೋಜನೆಯನ್ನು 2026 ಮತ್ತು 2041 ನ್ನು ಅಂದಾಜಿಸಲಾದ ಜನಸಂಖ್ಯೆಗೆ ತಲಾದಿನಂಪ್ರತಿ 110 ಎಲ್.ಪಿ.ಸಿ.ಡಿ. ಗ್ರಾಮಸಾರ ಅಂದಾಜಿಸಿ ಪಟ್ಟಣವನ್ನು 5 ವಲಯಗಳನ್ನಾಗಿ ವಿಂಗಡಿಸಿ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸಲು ಉದ್ದೇಶಿಸಲಾಗಿದೆ.

ಪ್ರಸ್ತುತ ಸರ್ಕಾರವು ಹಾಲಿ ಜಾರಿಯಲ್ಲಿರುವ ಒಳಚರಂಡಿ ಯೋಜನೆಗಳ ಆರ್ಥಿಕ ಮಾದರಿಯು ಸರ್ಕಾರದ ಸಾಲದಿಂದ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸ್ಥಳೀಯ ಸಂಸ್ಥೆಗಳ ವಂತಿಕೆಯಿಂದ ಯೋಜನೆಯ ಅಂದಾಜನ್ನು ಭರಿಸಲಾಗುತ್ತಿದ್ದು, ಸದರಿ ಸ್ಥಳೀಯ ಸಂಸ್ಥೆಗಳಲ್ಲಿನ ನಾಗರೀಕರ ಹಿತದೃಷ್ಟಿಯಿಂದ, ಪರಿಸರ ಸಂರಕ್ಷಣೆ ಹಿತದಲ್ಲಿ ಮತ್ತು ಮಲೀನ ನೀರು ನದಿಗಳನ್ನು/ಅಂತರ್ಜಲ ನೀರನ್ನು ಕಲುಷಿತಗೊಳಿಸದಿರುವ ದೃಷ್ಟಿಯಿಂದ ಎಲ್ಲಾ ಸ್ಥಳೀಯ ಸಂಸ್ಥೆಗಳಲ್ಲಿ ಒಳಚರಂಡಿ ಯೋಜನೆಗಳನ್ನು ಕಲ್ಪಿಸುವ ದೃಷ್ಟಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಸಬಲವಿಲ್ಲದ ಕಾರಣ ಈ ಯೋಜನೆಗಳ ಪ್ರಯೋಜನವನ್ನು ಪಡೆಯುವುದರಿಂದ ವಂಚಿತರಾಗುವುದನ್ನು ತಡೆಯಲು ಒಳಚರಂಡಿ ಯೋಜನೆಯ ಆರ್ಥಿಕ ಮಾದರಿಯನ್ನು ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಆದೇಶದನ್ವಯ ಪರಿಷ್ಕರಿಸಿ, ಆದೇಶಿಸಿರುತ್ತದೆ. ಸದರಿ ಆದೇಶದನ್ವಯ ಈ ಯೋಜನೆಯ ಆರ್ಥಿಕ ಮಾದರಿಯನ್ನು ಈ ಕೆಳಕಂಡಂತೆ ನಿಗದಿಗೊಳಿಸಬೇಕಾಗಿರುತ್ತದೆ.

| | | | |
|---|---|---|---|
| 1. | ಕರ್ನಾಟಕ ಸರ್ಕಾರದ ಅನುದಾನ–(75%) | | ರೂ. 1650.00 ಲಕ್ಷಗಳು |
| 2. | ಆರ್ಥಿಕ ಸಂಸ್ಥೆಗಳಿಂದ ಸಾಲ– (20%) | | ರೂ. 440.00 ಲಕ್ಷಗಳು |
| 3. | ಸ್ಥಳೀಯ ಸಂಸ್ಥೆಯ ವಂತಿಕೆ– (5%) | | ರೂ. 110.00 ಲಕ್ಷಗಳು |
| | | ಒಟ್ಟು | ರೂ. 2200.00 ಲಕ್ಷಗಳು |

ಈ ಯೋಜನೆಯನ್ನು ಮಂಡಳಿಯ 2011–12ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ಪ್ರಸ್ತುತ ಸಾಲಿನಲ್ಲಿ ಪ್ರವರ್ಗ–ಡಿ ಯಡಿಯಲ್ಲಿ ರೂ. 734.00 ಲಕ್ಷಗಳನ್ನು ಅನುವು ಮಾಡಲಾಗಿದೆ. ಲಕ್ಷ್ಮೇಶ್ವರ ಪುರಸಭೆಯು ದಿನಾಂಕ : 26–7–2010 ರಂದು ನಡೆದ ಸಭೆಯಲ್ಲಿ ಒಳಚರಂಡಿ ಯೋಜನೆಯನ್ನು ಕಲ್ಪಿಸಲು ಯೋಜನೆಯ ಆರ್ಥಿಕ ಮಾದರಿಯನ್ವಯ ತನ್ನ ಪಾಲಿನ ಮೊತ್ತವನ್ನು ಭರಿಸಲು, ಯೋಜನೆಯನ್ನು ಕಾರ್ಯಗತಗೊಳಿಸುವ ಸಮಯದಲ್ಲಿ ಸಾಮಗ್ರಿಗಳ ಬೆಲೆ ಏರಿಕೆಯಿಂದ ಅಥವಾ ಇತರೆ ಅನಿರೀಕ್ಷಿತ ಕಾರಣಗಳಿಂದ ಹೆಚ್ಚಾಗಬಹುದಾದ ವೆಚ್ಚವನ್ನು ಪರಿಗಣಿಸಲು, ಹಾಗೂ ಯೋಜನೆ ಕಾರ್ಯಗತಗೊಳಿಸಿದ ನಂತರ ನಿರ್ವಹಣೆಯನ್ನು ಸ್ಥಳೀಯ ಸಂಸ್ಥೆ ವಹಿಸಿಕೊಳ್ಳಲು ಮತ್ತು ಮಂಡಳಿ ಸೂಚಿಸುವ ನಿರ್ವಹಣಾ ದರಗಳನ್ನು ವಿಧಿಸಲು ಮತ್ತು ಯೋಜನೆಯಡಿಯಲ್ಲಿ ಅಗತ್ಯವಿರುವ ಭೂಮಿಯನ್ನು ಮಂಡಳಿಗೆ ಹಸ್ತಾಂತರಿಸಲು ಠರಾವು ಪಾಸು ಮಾಡಿರುತ್ತದೆ.

ಈ ಯೋಜನೆಯ ಅಂದಾಜಿನಲ್ಲಿ ಇಟಿಪಿ ಮತ್ತು ಸಾದಿಲ್ವಾರು ವೆಚ್ಚಗಳನ್ನು ಶೇ 5% ಕ್ಕೆ ನಿಗದಿಗೊಳಿಸಲಾಗಿದೆ. ಹಾಗೂ ಇತರೆ ಇಲಾಖೆಗಳಿಗೆ ಸಲ್ಲಿಸಬೇಕಾಗಿರುವ ಶೇವಣಿಗಳನ್ನು ಹಾಗೂ ಭೂ ಸ್ವಾಧೀನ ವೆಚ್ಚವನ್ನು ಸೇರಿಸಿ ಯೋಜನೆಯ ಅಂದಾಜನ್ನು ರೂ. 2200.00 ಲಕ್ಷಗಳಿಂದ ರೂ. 1836.65 ಲಕ್ಷಗಳಿಗೆ ಮಿತಿಗೊಳಿಸಿ ಅನುಮೋದನೆ ನೀಡಬಹುದಾಗಿದೆ.

ಸದರಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 07 ಯುಡಿಎಸ್ 2010, ಬೆಂಗಳೂರು, ದಿನಾಂಕ : 15–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಲಕ್ಷ್ಮೇಶ್ವರ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ರೂ. 1836.65 ಲಕ್ಷಗಳಲ್ಲಿ (ರೂ. ಒಂದು ಸಾವಿರದ ಎಂಟುನೂರು ಮುವತ್ತಾರು ಲಕ್ಷ ಅರವತ್ತೈದು ಸಾವಿರ ಮಾತ್ರ) ಕಲ್ಪಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. The Escalation charges should not form part of the estimate. It should be borne by the concerned ULB. The estimate is reduced to such extent.
2. The board shall invite the tender immediately after the handing over of the land required under the scheme in order to avoid time and cost run over.
3. The consent of the ULB shall be obtained for the extra cost that might occur due to deviations, extra item works or variations in the scheme.
4. Adequate provision to be made by the Board in the following Years for timely completion of the Project.
5. Escalations and Tender premium over and above the approved estimate cost should be approved with the prior consent of the ULB & Govt.
6. Water rates as proposed by KUWS & DB have to be implemented to meet O & M cost of UGD.
7. KTPP provisions, quality control and timely completion should ensured.
8. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
9. ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 171 Exp-9/2011, ದಿನಾಂಕ : 26–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 47

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಭೋಳಮಾನದೊಡ್ಡಿ ರಸ್ತೆಯ ಹತ್ತಿರ ಒಟ್ಟು 13.36 ಎಕರೆ ಪ್ರದೇಶದಲ್ಲಿ ವಸತಿ ಯೋಜನೆ ಕಾಮಗಾರಿಗಳ ಗುತ್ತಿಗೆಯನ್ನು ಅನುಮೋದಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರ ಪತ್ರ ಸಂಖ್ಯೆ : ರಾನಪ್ರಾ/ಎ.ಇನ್.ಜಿಜಿ/ 2011-12/774, ದಿನಾಂಕ : 26-9-2011.

**ಪ್ರಸ್ತಾವನೆ :**

ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಪತ್ರದಲ್ಲಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಭೋಳಮಾನದೊಡ್ಡಿ ರಸ್ತೆ ವಸತಿ ಯೋಜನೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಟೆಂಡರ್ ಪ್ರಕಟಣೆ ಹೊರಡಿಸಿದ್ದು, ಸದರಿ ಪ್ರಕಟಣೆಗೆ ಸ್ಪಂದಿಸಿ ಅತಿ ಕಡಿಮೆ ಬಿಡ್ ದರವನ್ನು ನಮೂದಿಸಿರುವ ಗುತ್ತಿಗೆದಾರರಾದ ಶ್ರೀ ಶ್ರೀನಿವಾಸ ಹೆಚ್. ಅಮ್ಮಾಪುರ ರವರ ಬಿಡ್‌ನ್ನು ಅನುಮೋದಿಸಲು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಕುರಿತು ಪರಿಶೀಲಿಸಲಾಗಿ, ಸದರಿ ವಸತಿ ಯೋಜನೆಯನ್ನು ಸರ್ಕಾರದ ಆದೇಶ ಸಂಖ್ಯೆ : ನಅಇ 203 ಗುಅಪ್ರಾ 2009, ದಿನಾಂಕ : 5-2-2010 ರಲ್ಲಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಅದರಂತೆ, ಈ ಯೋಜನೆಯಡಿ ರೂಪಿಸಲಾಗುವ 216 ನಿವೇಶನಗಳ ಮಾರಾಟದಿಂದ ಅಂದಾಜು ಮೊತ್ತ ಒಟ್ಟು ರೂ. 589.68 ಲಕ್ಷಗಳ ಆದಾಯವನ್ನು ಹಾಗೂ ಈ ಪೈಕಿ ಪ್ರಾಧಿಕಾರಕ್ಕೆ ಒಟ್ಟು ರೂ. 48.468 ಲಕ್ಷಗಳ ಲಾಭವನ್ನು ನಿರೀಕ್ಷಿಸಬಹುದೆಂದು ಅಂದಾಜಿಸಲಾಗಿರುತ್ತದೆ.

ಸದರಿ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡ ಲೋಕೋಪಯೋಗಿ ಇಲಾಖೆ ಧಾರವಾಡ ಇವರು ತಾಂತ್ರಿಕ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸರ್ಕಾರದ ಪತ್ರ ಸಂಖ್ಯೆ : ನಅಇ 15 ಗುಅಪ್ರಾ 2011, ದಿನಾಂಕ : 11-3-2011 ಟೆಂಡರ್ ಕರೆಯಲು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಅನುಮೋದನೆ ನೀಡಲಾಗಿದ್ದು, ಅದರಂತೆ ದಿನಾಂಕ : 15-3-2011 ರಂದು ರಾಜ್ಯ ಟೆಂಡರ್ ಬುಲಟಿನ್‌ನಲ್ಲಿ ಪ್ರಕಟಣೆಯನ್ನು ಪ್ರಕಟಿಸಲಾಗಿದೆ, ಹಾಗೂ ಹಲವಾರು ದಿನ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿ ಟೆಂಡರ್ ಆಹ್ವಾನಿಸಲಾಗಿದ್ದು, ಖಾಲಿ ಟೆಂಡರ್ ಖರೀದಿಸಲು ಅರ್ಜಿಸಲ್ಲಿಸಲು ಹಾಗೂ ಟೆಂಡರ್ ದಾಖಲೆಗಳನ್ನು ನೀಡಲು ದಿನಾಂಕ: 22-3-2011 ರಿಂದ 25-4-2011 ರ ವರೆಗೆ ನಿಗದಿ ಪಡಿಸಲಾಗಿದ್ದು, ಭರ್ತಿ ಮಾಡಿದ ಟೆಂಡರ್ ಸಲ್ಲಿಸಲು ದಿನಾಂಕ : 27-4-2011 ರ ವರೆಗೆ ನಿಗದಿ ಪಡಿಸಲಾಗಿತ್ತು. ಕೆಲವು ತಾಂತ್ರಿಕ ಕಾರಣಗಳಿಂದ ಸದರಿ ದಿನಾಂಕವನ್ನು 9-5-2011 ರವರೆಗೆ ಮತ್ತು ಭರ್ತಿ ಮಾಡಿದ ಟೆಂಡರ್ ಸಲ್ಲಿಸಲು ದಿನಾಂಕ : 11-5-2011 ಮಧ್ಯಾಹ್ನ 12.00 ಗಂಟೆವರೆಗೆ ಹಾಗೂ ಬಿಡ್‌ಗಳನ್ನು ತೆರೆಯಲು ದಿನಾಂಕ : 12-5-2011ರ ವರೆಗೆ ಮುಂದೂಡಲಾಗಿತ್ತು.

ಪ್ರಾಧಿಕಾರದಲ್ಲಿ ತಾಂತ್ರಿಕ ಸಿಬ್ಬಂದಿ ಇರದ ಕಾರಣ ಟೆಂಡರ್‌ಗಳನ್ನು ತೆರೆಯಲು ದಿನಾಂಕ : 3-8-2011 ನಿರ್ಣಯಿಸಿ ಸದರಿ ದಿನದಂದು 2 ಗುತ್ತಿಗೆದಾರರು ಹಾಜರಿದ್ದ ಕಾರಣ ಪುನಃ 8-8-2011 ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರ್ ಪರಿಶೀಲನಾ ಸಮಿತಿಯ ಸದಸ್ಯರು ಹಾಗೂ ಗುತ್ತಿಗೆದಾರರ ಸಮ್ಮುಖದಲ್ಲಿ ಟೆಂಡರ್ ಪೆಟ್ಟಿಗೆಯನ್ನು ತೆರೆದು ತಾಂತ್ರಿಕ ಬಿಡ್ಡುಗಳನ್ನು ಮಾತ್ರ ತೆರೆಯಲಾಯಿತು. ಟೆಂಡರ್ ಪರಿಶೀಲನಾ ಸಭೆಯಲ್ಲಿ 6 ಅಧಿಕಾರಿಗಳು ಭಾಗವಹಿಸಿದ್ದು, ಟೆಂಡರ್‌ನಲ್ಲಿ ಭಾಗವಹಿಸಿದ್ದ, 3 ಗುತ್ತಿಗೆದಾರರ ಪೈಕಿ 2 ಟೆಂಡರ್‌ಗಳನ್ನು ಕ್ರಮಬದ್ಧವಿಲ್ಲದ ಕಾರಣ ತಿರಸ್ಕರಿಸಲಾಯಿತು. ಶ್ರೀ ಶ್ರೀನಿವಾಸ್ ಹೆಚ್. ಅಮ್ಮಾಪೂರ, ಪ್ರಥಮ ದರ್ಜೆ ಗುತ್ತಿಗೆದಾರರು, ಭಗೀರಥ ಕಾಲೋನಿ, ಲಿಂಗಸೂಗುರು ಇವರು ಸಲ್ಲಿಸಿದ ತಾಂತ್ರಿಕ ಬಿಡ್ ದಾಖಲಾತಿಗಳನ್ನು ಪರಿಶೀಲಿಸಿ, ಇವರಿಗೆ ಇರುವ ಸಾಮರ್ಥ್ಯ ಮತ್ತು ಸಂಪನ್ಮೂಲಗಳ ಬಗ್ಗೆ ಕೂಲಂಕಶವಾಗಿ ದಾಖಲೆಗಳನ್ನು ಪರಿಶೀಲಿಸಿ ಸಮಿತಿ ಬಿಡ್‌ನ್ನು ಅರ್ಹತೆಗೊಳಿಸಲು ತೀರ್ಮಾನಿಸಿದೆ. ದಿನಾಂಕ : 12-8-2011 ರಂದು ಆರ್ಥಿಕ ಬಿಡ್ ತೆರೆಯಲಾಗಿದ್ದು, ಗುತ್ತಿಗೆದಾರರು ಕಾಮಗಾರಿಗಳಿಗೆ ಸಿಎಸ್‌ಆರ್ ದರಕ್ಕಿಂತ ಶೇ 26.45% ಹೆಚ್ಚಿನ ದರವನ್ನು ನಮೂದಿಸಿದ್ದು, ಸದರಿಯವರನ್ನು ಸಂಧಾನಕ್ಕೆ ಕರೆಯಲಾಗಿ ಸದರಿ ದರವನ್ನು ಶೇ 25.95%ಕ್ಕೆ ಕಡಿತಗೊಳಿಸಿ ಕಾಮಗಾರಿ ನಿರ್ವಹಿಸಲು ಒಪ್ಪಿರುತ್ತಾರೆಂದು ಆಯುಕ್ತರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ವರದಿ ನೀಡಿರುತ್ತಾರೆ. ಈ ಕುರಿತು ದಿನಾಂಕ: 24-8-2011 ರಂದು ನಡೆದ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಸಭೆಯಲ್ಲಿ ಸದರ ಟೆಂಡರ್ ಒಪ್ಪಿ, ಸರ್ಕಾರದ ಅನುಮೋದನೆ ಕೋರಲು ನಿರ್ಣಯಿಸಲಾಗಿದೆ.

ಸರ್ಕಾರವು, ಸದರಿ ಟೆಂಡರ್ ದಾಖಲೆಯನ್ನು ಪರಿಶೀಲಿಸಲಾಗಿ, ಸದರಿ ಕಾಮಗಾರಿಗಳ ಅಂದಾಜು ಮೊತ್ತ ರೂ. 2,64,00,942.73 ಇದ್ದು, ಸದರಿ ಮೊತ್ತಕ್ಕೆ ಗುತ್ತಿಗೆದಾರರು ನಮೂದಿಸಿದ ಮೊತ್ತ ರೂ. 3,66,88,908.02, ಈ ಮೊತ್ತವು ಅನುಮೋದಿತ ಅಂದಾಜು ಪಟ್ಟಿಗಿಂತ ಶೇ 38.97% ಹೆಚ್ಚಳವಾಗಿದ್ದು, 2011-12ನೇ ಸಾಲಿನ ದರ ಪಟ್ಟಿಗೆ ಹೋಲಿಸಿದರೆ ಸದರಿ ಮೊತ್ತವು (ಸಿಎಸ್‌ಆರ್) ರೂ. 2,89,91,789.77 ಇದ್ದು ಈ ಮೊತ್ತಕ್ಕೆ ಹೋಲಿಸಿದರೆ ಗುತ್ತಿಗೆದಾರರು ನಮೂದಿಸಿದ ಮೊತ್ತ ಶೇ. 26.54% ಹೆಚ್ಚಾಗಿರುತ್ತದೆ. ಮುಂದುವರೆದು ಸದರಿ ಮೊತ್ತವನ್ನು ಕಡಿಮೆ ಮಾಡಲು ಗುತ್ತಿಗೆದಾರರನ್ನು ಕೋರಲಾಗಿ, ಗುತ್ತಿಗೆದಾರರು ದಿನಾಂಕ : 17-8-2011 ರ ಪತ್ರದಲ್ಲಿ ಸದರಿ ದರವನ್ನು ಶೇ. 25.95% ಕ್ಕೆ ಕಡಿತಗೊಳಿಸಲು ಒಪ್ಪಿರುತ್ತಾರೆ.

ಸರ್ಕಾರವು, ಈ ಕುರಿತು ಪುನಃ ಗುತ್ತಿಗೆದಾರರೊಂದಿಗೆ ಸಂದಾನ ನಡೆಸಿ, ಸದರಿ ದರಗಳನ್ನು ಪುನರ್ ಪರಿಶೀಲಿಸಿ ಮಂಡಿಸುವಂತೆ ಸೂಚಿಸಿದ ಹಿನ್ನೆಲೆಯಲ್ಲಿ, ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ರಾಯಚೂರು ಇವರು ಪತ್ರ ದಿನಾಂಕ : 26-9-2011ನ್ನು ಫ್ಯಾಕ್ಸ್ ಮೂಲಕ ಸಲ್ಲಿಸಿದ್ದು, ದಿನಾಂಕ : 26-9-2011 ರಂದು ಗುತ್ತಿಗೆದಾರರನ್ನು ಸಂಧಾನಕ್ಕೆ ಕರೆದು ಸದರಿರವರೊಂದಿಗೆ ಮರು ಸಂಧಾನ ನಡೆಸಿ ಅದರಂತೆ ಗುತ್ತಿಗೆದಾರರು ಈಗಾಗಲೇ ನಮೂದಿಸಿದ 25.95% ಪ್ರಸ್ತುತ ಸಾಲಿನ ದರಪಟ್ಟಿಯ ಮೇಲೆ ದರಗಳನ್ನು 19.80%ಕ್ಕೆ ಇಳಿಸಲು ಒಪ್ಪಂದ ಮಾಡಿಕೊಂಡಿರುವುದಾಗಿ ತಿಳಿಸಿದ್ದು, ಗುತ್ತಿಗೆದಾರರು ಈ ಹಿಂದೆ ನಮೂದಿಸಿದ್ದ ಒಟ್ಟು ಮೊತ್ತದಲ್ಲಿ ರೂ. 22,56,368.00ಗಳನ್ನು ಕಡಿತಗೊಳಿಸಿದಂತಾಗುತ್ತದೆಂದು ತಿಳಿಸಿರುತ್ತಾರೆ. ಹಾಗೂ ಪ್ರಚಲಿತ ದರಪಟ್ಟಿ ಪ್ರಕಾರ ಮರು ಟೆಂಡರ್ ಕರೆದರೆ ಆರ್ಥಿಕವಾಗಿ ಶೇ. 15 ರಿಂದ 20 ರಷ್ಟು ಹೊರೆ ಹೆಚ್ಚಾಗುವುದರಿಂದ ಪ್ರಸ್ತುತ ಸಂಧಾನದ ಮೂಲಕ ಶೇ. 19.8ರಷ್ಟು ಪ್ರಸ್ತುತ ಸಾಲಿನ ದರಪಟ್ಟಿ ಮೇಲೆ ಹೆಚ್ಚಿನ ಮೊತ್ತಕ್ಕೆ ಅನುಮೋದನೆ ನೀಡಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಆಯುಕ್ತರ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಗುತ್ತಿಗೆದಾರರು ಈಗಾಗಲೇ ಒಪ್ಪಿಗೆ ಸೂಚಿಸಿದ್ದ ಮೊತ್ತಕ್ಕೆ ರೂ. 22,56,368.00 ಕಡಿಮೆಗೊಳಿಸಿದ್ದಲ್ಲಿ, ಸದರಿ ಮೊತ್ತವು ಪ್ರಸ್ತುತ ಚಾಲ್ತಿಯಲ್ಲಿರುವ ದರಪಟ್ಟಿಗಿಂತ ಶೇ 18.76% ಮಾತ್ರ ಹೆಚ್ಚಾಗಿದ್ದು, ಇದರಿಂದ ಒಟ್ಟು ಕಾಮಗಾರಿಗಳ ಮೊತ್ತವು ರೂ. 3,44,30,649.52ಕ್ಕೆ ಕಡಿತಗೊಳ್ಳುತ್ತದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಮೊತ್ತವನ್ನು ಪ್ರಸ್ತುತ ಚಾಲ್ತಿಯಲ್ಲಿರುವ ದರಪಟ್ಟಿಗಿಂತ ಶೇ. 16% ರಷ್ಟು ಹೆಚ್ಚಿನ ಮೊತ್ತದಲ್ಲಿ ಕಾಮಗಾರಿಗಳನ್ನು ಪೂರೈಸಲು ಸರ್ಕಾರವು ಸೂಚಿಸಿದಂತೆ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ರಾಯಚೂರುರವರು ಗುತ್ತಿಗೆದಾರರೊಂದಿಗೆ ಸಮಾಲೋಚಿಸಿ, ಪ್ರಸ್ತುತ ಚಾಲ್ತಿಯಲ್ಲಿರುವ ದರಪಟ್ಟಿಗಿಂದ ಶೇ. 16% ರಷ್ಟು ಹೆಚ್ಚಿನ ದರದಲ್ಲಿ ಗುತ್ತಿಗೆದಾರರು ಕಾಮಗಾರಿ ನಿರ್ವಹಿಸಲು ಒಪ್ಪಿರುತ್ತಾರೆ. ಇದರಿಂದ ಸದರಿ ಕಾಮಗಾರಿಗಳ ಒಟ್ಟು ಮೊತ್ತವನ್ನು ರೂ. 3,36,30,476.14 ಕ್ಕೆ ನಿಗದಿಗೊಳಿಸಿ, ಸದರಿ

ಟೆಂಡರ್‌ನ್ನು ಶ್ರೀ ಶ್ರೀನಿವಾಸ ಹೆಚ್. ಅಮ್ಮಾಪುರ, ಪ್ರಥಮ ದರ್ಜೆ ಗುತ್ತಿಗೆದಾರರಿಗೆ ಪ್ರಸಕ್ತ ಸಾಲಿನ ದರಪಟ್ಟಿಗಿಂತ ಶೇ. 16% ರಷ್ಟು ಹೆಚ್ಚಿನ ಮೊತ್ತಕ್ಕೆ ನೀಡಲು ತೀರ್ಮಾನಿಸಲಾಯಿತು.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 147 ಗುಅಪ್ರಾ 2011, ಬೆಂಗಳೂರು, ದಿನಾಂಕ : 16–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರವು ಭೋಳಮಾನದೊಡ್ಡಿ ರಸ್ತೆಯ ಹತ್ತಿರ ರಾಯಚೂರು ಗ್ರಾಮ ಸರ್ವೆ ನಂ. 935/11, 935/12, 936 ರಲ್ಲಿನ ಒಟ್ಟು ವಿಸ್ತೀರ್ಣ 13 ಎಕರೆ 36 ಗುಂಟೆ ಜಮೀನಿನಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಪ್ರಸ್ತಾವನೆಯಂತೆ ಪ್ರಸ್ತುತ ಚಾಲ್ತಿಯಲ್ಲಿರುವ ದರಪಟ್ಟಿಗಳನ್ವಯ ಕಾಮಗಾರಿಗಳ ಒಟ್ಟು ಮೊತ್ತ ರೂ. 2,89,91,789.77ಕ್ಕೆ ಶೇ 16% ರಷ್ಟು ಅಂದರೆ ರೂ. 46,38,686.37 ಹೆಚ್ಚಿನ ಮೊತ್ತಕ್ಕೆ, ಒಟ್ಟು ಮೊತ್ತ ರೂ. 3,36,30,476.14ಕ್ಕೆ ಗುತ್ತಿಗೆದಾರರಾದ ಶ್ರೀ ಶ್ರೀನಿವಾಸ ಹೆಚ್. ಅಮ್ಮಾಪುರ್ ರವರು ಸಲ್ಲಿಸಿರುವ ಟೆಂಡರ್‌ಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 48 ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರದೇಶಕ್ಕೆ ರಚನಾ ನಕ್ಷೆಗೆ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ನಅಇ 51 ಬಿಎಂಆರ್ 2002, ದಿನಾಂಕ : 21–9–2005.

2. ಸರ್ಕಾರಿ ಆದೇಶ ಸಂಖ್ಯೆ : ನಅಇ 51 ಬಿಎಂಆರ್ 2002, ದಿನಾಂಕ : 25–2–2006.

3. ತಿದ್ದುಪಡಿ ಆದೇಶ ಸಂಖ್ಯೆ : ನಅಇ 51 ಬಿಎಂಆರ್ 2005, ದಿನಾಂಕ : 21–10–2006.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21–9–2005ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶದ ಯೋಜಿತ ಬೆಳವಣಿಗೆಗಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಸಿದ್ದಪಡಿಸಿರುವ ರಚನಾ ನಕ್ಷೆಯಲ್ಲಿ ಅನುಮತಿಸಬಹುದಾದ ಉಪಯೋಗಗಳನ್ನು ಅಳವಡಿಸಿ ಜಾರಿಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (2) ಮತ್ತು (3) ರಲ್ಲಿ ಓದಲಾದ ದಿನಾಂಕ : 25–2–2006 ಮತ್ತು 21–10–2006 ರ ತಿದ್ದುಪಡಿ ಆದೇಶದಲ್ಲಿ ಸ್ಥಳೀಯವಾಗಿ ದೊರೆಯುವ ಕೃಷಿ ಉತ್ಪಾದನಾ ಕಚ್ಚಾ ಸಾಮಗ್ರಿ ಆಧಾರಿತ ಕೃಷಿ ಉತ್ಪಾದನಾ ಸಂಸ್ಕರಣಾ ಹಾಗೂ ಸಂಬಂಧಿಸಿದ ಘಟಕಗಳು (ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Processing) ಕೈಗಾರಿಕಾ ನೀತಿ, 2003, ಆದೇಶ ಸಂಖ್ಯೆ : CI 29 SPI 2002, ದಿನಾಂಕ : 28–6–2003 ರಲ್ಲಿ ವ್ಯಾಖ್ಯಾನಿಸಿರುವಂತೆ) ಸ್ಥಾಪಿಸಲು ಅವಕಾಶ ಕಲ್ಪಿಸಿ ಸರ್ಕಾರ ಮಂಜೂರಾತಿ ನೀಡಿತ್ತು.

ಮುಂದುವರೆದು ಸರ್ಕಾರವು ಅನುಮೋದಿಸಿರುವ ರಚನಾ ನಕ್ಷೆಯಂತೆ, ನಗರೀಕರಣಕ್ಕೆ ಒಳಪಡಬಹುದಾದಂತಹ, ಹಾಗೂ ನಗರೀಕರಣದಿಂದ ಹೊರತುಪಡಿಸಿರುವ ಪ್ರದೇಶಗಳನ್ನು ಹಾಲಿ ಇರುವ ನೈಸರ್ಗಿಕ ಸಂಪತ್ತು ಮೂಲಭೂತ ಸೌಲಭ್ಯಗಳು ಇತ್ಯಾದಿಗಳನ್ನು ಪರಿಗಣಿಸಿ, ಪ್ರದೇಶ ಯೋಜನಾ ವಲಯ (APZ) ಮತ್ತು ವ್ಯವಸಾಯ ಪ್ರದೇಶ (IZ)ಗಳೆಂದು ವರ್ಗೀಕರಿಸಲಾಗಿದೆ. ಈ ವರ್ಗೀಕರಣದಲ್ಲಿ, 5 APZ ಗಳನ್ನು 6 IZ ವಲಯಗಳನ್ನು ಗುರುತಿಸಿದ್ದು, ಅವುಗಳಿಗೆ ಪ್ರತ್ಯೇಕವಾದ ನೀತಿಗಳನ್ನು ಪ್ರಸ್ತಾಪಿಸಿ ಆಳವಡಿಸಿಕೊಳ್ಳಲಾಗಿದೆ. ಈ ನಕ್ಷೆಯನ್ನು 1998ರ ಸಾಲಿನಲ್ಲಿ ಪರಿಕಲ್ಪಿಸಿಕೊಂಡು ತಯಾರಿಸಲಾಗಿದೆ. ಆಗಿನ ಸನ್ನಿವೇಶ ಮತ್ತು ಆ ಸಮಯದಲ್ಲಿ ಪರಿಕಲ್ಪಿತ ಬೆಳವಣಿಗೆಗಳನ್ನು ಕೇಂದ್ರಿಕರಿಸಿಕೊಂಡು ಸರ್ಕಾರ ದಿನಾಂಕ : 21–9–2005ರಂತೆ ವ್ಯವಸಾಯ ವಲಯದಲ್ಲಿ ಅಂದರೆ IZ ವಲಯದಲ್ಲಿ ಬರುವ ವ್ಯವಸಾಯ ವಲಯದಲ್ಲಿ ಅನುಮತಿಸಬಹುದಾದಂತಹ ಬೆಳವಣಿಗೆಗಳನ್ನು ಕುರಿತು ನಿಯಮಗಳನ್ನು ಪ್ರಚುರಪಡಿಸಿರುತ್ತದೆ. ಅದರಂತೆ ವ್ಯವಸಾಯ ವಲಯದಲ್ಲಿ (IZ) ಆಸ್ಪತ್ರೆಗಳನ್ನು (ಅ) ವಿಶೇಷ ಸಂದರ್ಭಗಳಲ್ಲಿ ಅನುಮತಿಸಲು ಅವಕಾಶ ಕಲ್ಪಿಸಲಾಗಿದೆ. ಆದರೆ, ಆಸ್ಪತ್ರೆಯ ಶೀರ್ಷಿಕೆಯಡಿ ಆರೋಗ್ಯಕ್ಕೆ ಸಂಬಂಧಪಟ್ಟ ಯಾವ ಯಾವ ರೀತಿಯ ಚಟುವಟಿಕೆಗಳನ್ನು ಅನುಮತಿಸಬೇಕೆಂಬುದರ ಬಗ್ಗೆ ವಿವರಣೆಯನ್ನು ನೀಡಿರುವುದಿಲ್ಲ. ಅಂದಿನ ದಿನಗಳಲ್ಲಿ Yoga theraphy, Wellness centers, Healing centers, Rejuvenation Health centers ಇತ್ಯಾದಿಗಳ ಪರಿಕಲ್ಪನೆ ಇಲ್ಲದಿದ್ದ ಕಾರಣ ಸದರಿ ಆದೇಶದಲ್ಲಿ ಈ ಅಂಶಗಳ ಬಗೆಗಿನ ವಿವರಣೆಯ ಕೊರತೆಯನ್ನು ಗಮನಿಸಬಹುದಾಗಿದೆ ಪ್ರಸ್ತುತ ತೀವ್ರ ತೆರನಾದ ನಗರೀಕರಣದ ಪರಿಣಾಮಗಳಿಂದಾಗಿ ಮನುಕುಲದ ಮೇಲೆ ಸಾಕಷ್ಟು ಗುಣಾತ್ಮಕ/ಋಣಾತ್ಮಕ ಪರಿಣಾಮಗಳು ಉಂಟಾಗುತ್ತಿದ್ದು, ಋಣಾತ್ಮಕ ಪರಿಣಾಮಗಳಡಿಯಲ್ಲಿ ಮಾನಸಿಕ ಹಾಗೂ ದೈಹಿಕ ಸ್ವಾಸ್ಥದ ಕಡೆ ಹೆಚ್ಚಿನ ಆರೈಕೆಯ ಅಗತ್ಯತೆಯು ಉದ್ಭವವಾಗಿ ಈ ಹಿನ್ನೆಲೆಯಲ್ಲಿ ಇತ್ತೀಚಿನ ಚಿಕಿತ್ಸಾ ಕ್ರಮಗಳಾದ Yoga theraphy, Wellness centers, Healing centers, Rejuvenation Health center ಮತ್ತು ವೈದ್ಯಕೀಯ ಚಿಕಿತ್ಸೆ ಇತ್ಯಾದಿ ಆರೋಗ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಸ್ಥಾಪಿಸಲು ಸಾಕಷ್ಟು ಅರ್ಜಿಗಳು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಮತ್ತು ಸರ್ಕಾರಕ್ಕೆ ಬರುತ್ತಿರುವುದರಿಂದ ಈ ರೀತಿಯ ಬೆಳವಣಿಗೆಗಳನ್ನು ಮೇಲೆ (1) ಮತ್ತು (2)ರಲ್ಲಿ ಉಲ್ಲೇಖಿಸಿದ ಸರ್ಕಾರಿ ಆದೇಶದಲ್ಲಿನ ವಿವರಣೆಯ ಕೊರತೆಯಿಂದಾಗಿ ಪರಿಗಣಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ, IZ ವಲಯಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಆಸ್ಪತ್ರೆಯ ಶೀರ್ಷಿಕೆಯಡಿಯಲ್ಲಿ Yoga theraphy, Wellness centers, Healing centers, Rejuvenation Health center ವೈದ್ಯಕೀಯ ಚಿಕಿತ್ಸೆಗೆ ಸಂಬಂಧಪಟ್ಟಂತೆ Health Resorts, ಹಾಗೂ ಆರೋಗ್ಯಕ್ಕೆ ಸಂಬಂಧಿಸಿದ ಎಲ್ಲಾ ಪೂರಕ ಚಟುವಟಿಕೆ ಮತ್ತು ಬೆಳವಣಿಗೆಗಳು ಸೇರಿದಂತೆ ಒಟ್ಟಾರೆ ಪ್ರದೇಶದ ಶೇಕಡ 20ರಷ್ಟು ವಿಸ್ತೀರ್ಣದಲ್ಲಿ ನೆಲಮಹಡಿಗೆ ಸೀಮಿತಗೊಳಿಸಿದಂತೆ ಸುತ್ತಮುತ್ತಲಿನ ಪರಿಸರಕ್ಕೆ ಧಕ್ಕೆ ಬಾರದ ರೀತಿಯಲ್ಲಿ, ಸ್ಥಳೀಯ ಪ್ರದೇಶದಲ್ಲಿ ಲಭ್ಯವಿರುವ ಕಟ್ಟಡ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಪೂರಕ ರೀತಿಯಲ್ಲಿ ಬೆಳವಣಿಗೆ ಕೈಗೊಳ್ಳಲು/ಅನುಮತಿಸಲು ಹಾಗೂ ಉಳಿಕೆ ಶೇಕಡ 80ರಷ್ಟು ಭಾಗವನ್ನು ಹಸಿರು ಪ್ರದೇಶವನ್ನಾಗಿ ಉನ್ನತೀಕರಿಸಲು ಹಾಗೂ ಸದರಿ ಪ್ರದೇಶದಲ್ಲಿ ಮಳೆ ನೀರು ಕೊಯ್ಲು ಯೋಜನೆ ಮತ್ತು ಸೌರವಿದ್ಯುತ್ ಅಳವಡಿಸುವ ನಿಬಂಧನೆಗಳನ್ನು ವಿಧಿಸುವ ಮೂಲಕ ಮಂಜೂರಾತಿ ನೀಡುವ ಬಗ್ಗೆ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 274 ಬಿಎಂಆರ್ 2011, ಬೆಂಗಳೂರು, ದಿನಾಂಕ : 9–11–2011**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಸರ್ಕಾರಿ ಆದೇಶ ಸಂಖ್ಯೆ : ನಅಇ 51 ಬಿಎಂಆರ್ 2002, ದಿನಾಂಕ : 21–9–2005 ಮತ್ತು ತಿದ್ದುಪಡಿ ಆದೇಶ ದಿನಾಂಕ : 21–10–2006ರಲ್ಲಿ ಮಂಜೂರಾತಿ

ನೀಡಿರುವ ರಚನಾ ನಕ್ಷೆಯ ವ್ಯವಸಾಯ ವಲಯದಲ್ಲಿನ IZ ವಲಯದ (ಅ) ವಿಶೇಷ ಸಂದರ್ಭಗಳಲ್ಲಿ ಆಸ್ಪತ್ರೆಯ ಶೀರ್ಷಿಕೆಯಡಿಯಲ್ಲಿ Yoga theraphy, Wellness centers, Healing centers, Rejuvenation Health center, ವೈದ್ಯಕೀಯ ಚಿಕಿತ್ಸೆಗೆ ಸಂಬಂಧಪಟ್ಟಂತೆ Health Resorts ಹಾಗೂ ಆರೋಗ್ಯಕ್ಕೆ ಸಂಬಂಧಿಸಿದ ಎಲ್ಲಾ ಪೂರಕ ಚಟುವಟಿಕೆ ಮತ್ತು ಬೆಳವಣಿಗೆ ಸೇರಿದಂತೆ ಒಟ್ಟಾರೆ ಪ್ರದೇಶದ ಶೇಕಡ 20ರಷ್ಟು ವಿಸ್ತೀರ್ಣದಲ್ಲಿ ನೆಲಮಹಡಿಗೆ ಸೀಮಿತಗೊಳಿಸಿದಂತೆ ಸುತ್ತಮುತ್ತಲಿನ ಪರಿಸರಕ್ಕೆ ಧಕ್ಕೆ ಬಾರದ ರೀತಿಯಲ್ಲಿ ಸ್ಥಳಿಯ ಪ್ರದೇಶದಲ್ಲಿ ಲಭ್ಯವಿರುವ ಕಟ್ಟಡ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಮೇಲೆ ತಿಳಿಸಿರುವ ಬೆಳವಣಿಗೆಗಳಿಗೆ ಅನುಮತಿ ನೀಡಲು ಸರ್ಕಾರದ ಮಂಜೂರಾತಿ ನೀಡಿದೆ. ಈ ರೀತಿಯ ಬೆಳವಣಿಗೆಗಳನ್ನು ಕೈಗೊಳ್ಳಲು ಉಳಿಕೆ ಶೇಕಡ 80 ರಷ್ಟು ಭಾಗವನ್ನು ಹಸಿರು ಪ್ರದೇಶವನ್ನಾಗಿ ಉನ್ನತೀಕರಿಸಲು ಮತ್ತು ಸದರಿ ಪ್ರದೇಶದಲ್ಲಿ ಮಳೆ ನೀರು ಕೊಯ್ಲು ಯೋಜನೆ ಮತ್ತು ಸೌರವಿದ್ಯುತ್ ಅಳವಡಿಸುವ ನಿಬಂಧನೆಗಳಿಗೆ ಒಳಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 49

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ)., ಮಂಡ್ಯ–ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮರುಪಾವತಿಗಾಗಿ (ದಿನಾಂಕ : 30–6–2011 ಹಾಗೂ 30–9–2011 ಅಂತ್ಯಕ್ಕೆ) ಸರ್ಕಾರದಿಂದ ಅಸಲು ಮತ್ತು ಬಡ್ಡಿ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007, ದಿನಾಂಕ : 26–3–2010.
2. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007, ದಿನಾಂಕ : 23–7–2010.
3. ಸರ್ಕಾರದ ಆದೇಶ ಸಂಖ್ಯೆ : ಸಿಐ 184 ಎಸ್‌ಜಿಎಫ್ 2007 (3), ದಿನಾಂಕ : 18–12–2010.
4. ಸರ್ಕಾರದ ಆದೇಶ ಸಂಖ್ಯೆ : ಸಿಐ 08 ಎಸ್‌ಜಿಎಫ್ 2011, ದಿನಾಂಕ : 5–4–2011.
5. ಸರ್ಕಾರದ ಆದೇಶ ಸಂಖ್ಯೆ : ಸಿಐ 78 ಬಿಆರ್‌ಎಸ್ 2011, ದಿನಾಂಕ : 15–10–2011.

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ ರೂ. 5726.16 ಲಕ್ಷಗಳ ಸಾಲ ಪಡೆಯಲು ದಿನಾಂಕ : 30–7–2001 ರಂದು ಕಾರ್ಖಾನೆಯು ಹುಡ್ಕೋದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಮೇಲೆ ಓದಲಾದ (1), (2) (3) ಮತ್ತು (4) ರಲ್ಲಿರುವ ಆದೇಶಗಳಲ್ಲಿ ಹುಡ್ಕೋ ಸಂಸ್ಥೆಯು ಮಾಡಿದ OTS offer ನಂತೆ ಸಾಲ ಮತ್ತು ಬಡ್ಡಿ ಪಾವತಿಗಾಗಿ ಒಟ್ಟು ರೂ. 5493.99 ಲಕ್ಷಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

ಡೆಪ್ಯೂಟಿ ಜನರಲ್ ಮ್ಯಾನೇಜರ್ (ಫೈನಾನ್ಸ್), ಹುಡ್ಕೋ, ಬೆಂಗಳೂರು ರವರು ಕೋರಿಕೆಯ ಮೇರೆಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ (5)ರಲ್ಲಿರುವ ಆದೇಶದಲ್ಲಿ ಹುಡ್ಕೋ ಸಂಸ್ಥೆಗೆ ದಿನಾಂಕ : 30–6–2011 ಹಾಗೂ 30–9–2011ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ. 6,54,92,425/– ನ್ನು ಪಾವತಿಸುವ ಸಲುವಾಗಿ ಲೆಕ್ಕ ಶೀರ್ಷಿಕೆ 4860–04–190–1–00–211 Investment (Plan) ಅಡಿಯಲ್ಲಿ 491.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಒದಗಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 08 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ : 18–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ ರೂ. 5726.16 ಲಕ್ಷ ರೂ.ಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ದಿನಾಂಕ : 30–6–2011 ಹಾಗೂ 30–9–2011ರ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ. 655.00 ಲಕ್ಷಗಳನ್ನು (ಆರು ನೂರ ಐವತ್ತೈದು ಲಕ್ಷ ರೂಪಾಯಿಗಳು ಮಾತ್ರ) ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಇರುವ ಹಣವನ್ನು ಕಾಲಕಾಲಕ್ಕೆ ಕಾರ್ಖಾನೆಯ ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳುವುದು.

2011–12ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಲೆಕ್ಕ ಶೀರ್ಷಿಕೆ "4860–04–190–1–00–211" Investment (Plan) ಅಡಿಯಲ್ಲಿ 2011–12ನೇ ಸಾಲಿಗೆ ಒದಗಿಸಲಾಗಿರುವ ಅನುದಾನ ಹಾಗೂ ಹೆಚ್ಚುವರಿ ಅನುದಾನದಲ್ಲಿ ರೂ. 655.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1477 ವೆಚ್ಚ–1/2011 ದಿನಾಂಕ : 17–10–2011 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್, ಎಲ್.**
ಪೀಠಾಧಿಕಾರಿ (ಸಕ್ಕರೆ) ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 50